ಓಂ ಶ್ರೀ ಗುರು ಬಸವಲಿಂಗಾಯ ನಮಃ







ಬಸವಾದಿ ಶರಣರ ಧರ್ಮ ಸಾಹಿತ್ಯ
ಸಂಸ್ಕೃತಿಗಳ ಪ್ರಸಾರಕ್ಕೆ ಮೀಸಲಾಗಿರುವ
ತ್ರೈಮಾಸಿಕ ಪತ್ರಿಕೆ

# ಬಸವ ಬೆಳಗು



ಶ್ರೀ ಲಿಂಗಾನಂದ ಸ್ವಾಮಿಗಳು
ಬಸವಧರ್ಮಪೀಠ, ಕೂಡಲಸಂಗಮ



ವಿ. ಸಿದ್ಧರಾಮಣ್ಣ ಶರಣರು



ಶ್ರೀ ಚೆನ್ನಬಸವ ಪಟ್ಟದ್ದೇವರು
ಹಿರೇಮಠ ಸಂಸ್ಥಾನ, ಭಾಲ್ಕಿ



ಶ್ರೀ ಮಹಾಂತ ಜೋಳಿಗೆಯ ಶಿವ ಶಿಲ್ಪಿ
ಮಹಾಂತ ಸ್ವಾಮಿಗಳು



ಶ್ರೀ ಬಸವಲಿಂಗ ಪಟ್ಟದ್ದೇವರು



ಶ್ರೀ ಗುರುಮಹಾಂತ
ಸ್ವಾಮಿಗಳು



ಶ್ರೀ ಶಿವಾನಂದ ಗುರೂಜಿ



ಶ್ರೀ ಸಿದ್ಧಣ್ಣ ಲಂಗೋಟಿ

ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ ಇಳಕಲ್ಲ

ಸಂಪುಟ : ೩೮ ಅಕ್ಟೋಬರ್-ನವೆಂಬರ-ಡಿಸೆಂಬರ-೨೦೨೪ ಸಂಚಿಕೆ-೪ ಬೆಲೆ : ರೂ. ೨೦

## ಮತ್ತಿಹಳ್ಳಿ ಗ್ರಾಮದ ಶರಣಮಂಟಪದಲ್ಲಿ
## ಪೂಜ್ಯಶ್ರೀ ವಿ. ಸಿದ್ಧರಾಮಣ್ಣ ಶರಣರು ಮಹಾಲಿಂಗದೊಳಗೆ ಬಯಲಾದಾಗ
## ಶರಣರ ಲಿಂಗದೇಹಕ್ಕೆ-ವಿಭೂತಿ ಧಾರಣಗೈಯುತ್ತಿರುವ ಪೂಜ್ಯರು



ಪೂಜ್ಯ ಶ್ರೀಮನಿಪ್ರ ಗುರುಮಹಾಂತ ಸ್ವಾಮಿಗಳು ಚಿತ್ತರಗಿ ಸಂಸ್ಥಾನಮಠ, ಇಳಕಲ್ಲ
ಪೂಜ್ಯ ಶ್ರೀಮಘಚ ಬಸವಲಿಂಗ ಪಟ್ಟದ್ದೇವರು, ಹಿರೇಮಠ ಸಂಸ್ಥಾನ, ಭಾಲ್ಕಿ.

## ದಾವಣಗೆರೆಯ ಬಸವಬಳಗದಲ್ಲಿ ಶರಣರ ಲಿಂಗದೇಹಕ್ಕೆ ಗೌರವ ನಮನ



ಪೂಜ್ಯ ಬಸವರಾಜಪ್ಪ ವೆಂಕಟಾಪುರ ಶರಣರು, ಪೂಜ್ಯ ಕುಮುದಿನಿತಾಯಿ ಬೆಳಗಾವಿ
ಹಾಗೂ ಮತ್ತಿಹಳ್ಳಿಯ ಶರಣೆ ಶಕುಂತಲಾ, ಶರಣೆ ಸುಮಂಗಲಾ ಮುಂತಾದವರು.

॥ ಓಂ ಶ್ರೀ ಗುರು ಬಸವಲಿಂಗಾಯ ನಮಃ ॥

# ಬಸವ ಬೆಳಗು

ನಿರಂಜನ ಶರಣ ಹರ್ಡೇಕರ ಮಂಜಪ್ಪನವರ ಜನ್ಮಶತಮಾನೋತ್ಸವ (೧೯೮೬) ಸಂದರ್ಭದಲ್ಲಿ
ಶರಣ ಸಂದೇಶವೇ ಬಸವ ಬೆಳಗು ಎಂಬ ನೂತನ ಹೆಸರಿನಲ್ಲಿ ಪ್ರಾರಂಭ
ಬಸವಗುರು ಪ್ರಣೀತ ಲಿಂಗವಂತ ಧರ್ಮ-ಸಾಹಿತ್ಯ-ಸಂಸ್ಕೃತಿಗಳ ಪ್ರಸಾರಕ್ಕೆ ಮೀಸಲಾಗಿರುವ
ತ್ರೈಮಾಸಿಕ ಪತ್ರಿಕೆ

ಅರಿದಡೆ ಶರಣ
ನ್ಯಾಯನಿಷ್ಠುರಿ
ಲೋಕವಿರೋಧಿ ಶರಣ




ಮರೆದಡೆ ಮಾನವ
ದಾಕ್ಷಿಣ್ಯಪರನು ನಾನಲ್ಲ
ಯಾರಿಗೂ ಅಂಜುವನಲ್ಲ

ಸಂಪುಟ : ೩೮ ಅಕ್ಟೋಬರ್-ನವೆಂಬರ-ಡಿಸೆಂಬರ ೨೦೨೪ ಸಂಚಿಕೆ ೪

## ಬಸವಾನುಭಾವಿಗೆ ಶರಣಾರ್ಥಿ

ಬಸವ ಗುರುವಿನ ಕರುಣೆಯ ಕಂದನಾಗಿ
ಸಮತೆ ಸ್ವಾತಂತ್ರ್ಯ ಬಂಧುತ್ವ ಮಾನವೀಯತೆಯ
ವಾರಿಧಿ ನೀವಾಗಿ, ಸದ್ಗುರು ಲಿಂಗಾನಂದರ ಬಸವಾ-
ನುಗ್ರಹಕ್ಕೆ ಪಾತ್ರರಾಗಿ, ಕಲ್ಯಾಣನಾಡಿನ ದೇವರಾಗಿದ್ದ
ಭಾಲ್ಕಿಯ ಚೆನ್ನಬಸವ ಪಟ್ಟದ್ದೇವರ ಕರುಳಿನ ಮಮತೆಯ
ವಿಶೇಷ ಕರೆಗೆ ಓಗೊಟ್ಟು ಕಲ್ಯಾಣನಾಡಿಗೆ ಬಂದು
ವಿಶ್ವಬಸವಧರ್ಮ ಕೇಂದ್ರ ಬಸವಕಲ್ಯಾಣದಲಿ ವಿಶ್ವಕಲ್ಯಾಣದ
ಸಿದ್ಧರಾಮಣ್ಣ ಶರಣರೆಂದು ಜನಮಾನಸದಿ ಪ್ರಸಿ-
ದ್ಧರಾಗಿ ಅನುಭವ ಮಂಟಪದ ಆಜೀವ ಸಂಚಾಲಕರಾಗಿ
ರಾಷ್ಟ್ರಮಟ್ಟದಲಿ ಬಸವತತ್ವ ಪ್ರಸಾರಗೈಯುತ ಬಸವ
ಮಹಾಮನೆಯ ಬಸವಭಕ್ತ ಶರಣ ಶರಣೆಯರಿಗೆ ಅ-
ಣ್ಣ ಸಿದ್ಧರಾಮಣ್ಣರಾಗಿ, ವಚನ ಸಂಗೀತ ಕಲಿಸುವ
ಶರಣ ನೀವಾಗಿ ಬಸವಾದಿ ಶರಣರ ನಾಟಕಗಳ
ರಚಿಸಿ ಆಡಿಸಿ ಜನಮಾನಸದ ಅಜ್ಞಾನ ಕಳೆಯುತ್ತಾ ಶ್ರಾವ-
ಣ ಸೋಮವಾರದಂದು ಬಸವ ಮಹಾಬಯಲಿನಲಿ ಬಯಲಾದ
ಋಜು ಜೀವನದ ಬಸವಾನುಭಾವಿಯೇ ನಿಮಗೆ ಶರಣಾರ್ಥಿ

-ಸಿದ್ಧಣ್ಣ ಲಂಗೋಟಿ (ಚಾಂದಕವತೆ)

**ಸಂಸ್ಥಾಪಕರು :**

ಮಹಾಂತಜೋಳಿಗೆಯ ಶಿವಶಿಲ್ಪಿ

**ಲಿಂ. ಪೂಜ್ಯ ಶ್ರೀ ಮನಿಪ್ರ ಡಾ. ಮಹಾಂತ ಶಿವಯೋಗಿಗಳು**

ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ ಇಳಕಲ್ಲ

**ಸಂಪಾದಕ ಸಲಹಾ ಸಮಿತಿಯ ಸಂಚಾಲಕರು ಹಾಗೂ ಮಾರ್ಗದರ್ಶಕರು :**

**ಪೂಜ್ಯ ಶ್ರೀ ಮನಿಪ್ರ ಗುರುಮಹಾಂತಸ್ವಾಮಿಗಳವರು**

ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನ ಮಠ ಇಳಕಲ್ಲ

**ಗೌ॥ ಸಂಪಾದಕರು :**

**ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)**

ಎಂ.ಎ.(ತತ್ವಜ್ಞಾನ)ಎಲ್‌ಎಲ್‌ಬಿ.(ಸ್ಪೇಶಲ್)

ಎಂ.ಎ. (ಕನ್ನಡ), ಎಂ.ಎ.(ಹಿಂದಿ),ಸಿ.ವಾಯ್.ಇಡಿ (ಯೋಗ)

ಬಸವ ಬೆಳಗು, ಮಹಾಂತೇಶ ನಗರ, ರಾಮದುರ್ಗ ಜಿ. ಬೆಳಗಾವಿ.

**ಬಸವ ಬೆಳಗು ಸಂಪಾದಕ ಸಲಹಾ ಸಮಿತಿ**

| | |
|---|---|
| ಶ್ರೀ ಮನಿಪ್ರ ಡಾ. ಬಸವಲಿಂಗಸ್ವಾಮಿಗಳು ಶ್ರೀ ವಿಜಯಮಹಾಂತೇಶತೀರ್ಥಶಿರೂರ | ಬಾಗಲಕೋಟೆ |
| ಶ್ರೀ ಮನಿಪ್ರ ಬಸವಲಿಂಗಸ್ವಾಮಿಗಳು ಸಿದ್ದಯ್ಯನಕೋಟೆ | ಚಿತ್ರದುರ್ಗ |
| ಶ್ರೀ ಮನಿಪ್ರ ಸಿದ್ಧಲಿಂಗಸ್ವಾಮಿಗಳು ಲಿಂಗಸಗೂರು–ಛಾವಣಿ | ರಾಯಚೂರು |
| ಶ್ರೀ ಮಘಚ ಡಾ॥ ಬಸವಲಿಂಗ ಪಟ್ಟದ್ದೇವರು ಅನುಭವ ಮಂಟಪ | ಬಸವಕಲ್ಯಾಣ |
| ಶ್ರೀ ಮನಿಪ್ರ ಗುರುಬಸವ ಸ್ವಾಮಿಗಳು ಪಾಂಡೋಮಟ್ಟಿ | ಚೆನ್ನಗಿರಿ |
| ಶ್ರೀ ಮನಿಪ್ರ ಪ್ರಭುಸ್ವಾಮಿಗಳು ಚರಂತಿಮಠ | ಬಾಗಲಕೋಟೆ |
| ಶ್ರೀ ಮನಿಪ್ರ ಶಿವಾನಂದ ಮಹಾಸ್ವಾಮಿಗಳು | ಹುಲಸೂರ |
| ಶ್ರೀ ಮನಿಪ್ರ ಗುರುಮಹಾಂತಸ್ವಾಮಿಗಳು ಮರೆಗುದ್ದಿ–ಪಿ.ಎಂ. ಬುದ್ನಿ, ರಬಕವಿ | ಜಮಖಂಡಿ |
| ಶ್ರೀ ಬಸವಾನಂದ ಸ್ವಾಮಿಗಳು, ಗುರುಬಸವ ಮಹಾಮನೆ, ಮನಗುಂಡಿ | ಧಾರವಾಡ |
| ಶ್ರೀ ಸಿದ್ಧರಾಮ ಶರಣರು ಬೆಲ್ದಾಳ, ಬಸವಯೋಗಾಶ್ರಮ ಕೌಠಾ (ಬಿ) | ಬೀದರ |
| ಶ್ರೀ ಶಿವಾನಂದ ಗುರೂಜಿ ಬಸವಗುರು ತಪೋವನ, ಶಿರಮಗೊಂಡನಹಳ್ಳಿ | ದಾವಣಗೆರೆ |
| ಶ್ರೀ ಬಸವರಾಜ ಹೂಗಾರ, ಶರಣ ಸಾಹಿತಿಗಳು ಹಿರೇಸಿಂಗನಗುತ್ತಿ | ಇಳಕಲ್ಲ |
| ಶ್ರೀ ಮಾತೆ ವಾಗ್ದೇವಿ ಬಸವತತ್ವ ಅನುಭಾವ ಕೇಂದ್ರ | ಬೆಳಗಾವಿ |
| ಬಸವಸಂಜಾತೆ ಡಾ. ಕಲ್ಯಾಣಮ್ಮ ಲಂಗೋಟಿ | ರಾಮದುರ್ಗ |
| ಶ್ರೀ ರಮೇಶ ಶಂಕ್ರಪ್ಪ ತುಂಬರಗುದ್ದಿ | ಧಾರವಾಡ |
| ಶ್ರೀ ಸಂಗಣ್ಣ ಬಸಪ್ಪ ಗದ್ದಿ, ಶರಣ ಸಾಹಿತಿಗಳು | ಇಳಕಲ್ಲ |
| ಶ್ರೀ ಪ್ರಭುಲಿಂಗ ಮನೋಹರ ಮೈದರಗಿ | ಹುಬ್ಬಳ್ಳಿ |
| ಶ್ರೀ ಬಿ.ಎಂ. ಪಾಟೀಲ ಮರಾಠಿ ಸಾಹಿತಿಗಳು | ಕೊಲ್ಹಾಪುರ |
| ಶರಣೆ ವೀರಮ್ಮ ಎಂ. ಕುಂಬಾರ, ಸಾಹಿತಿಗಳು, ಅಕ್ಕನಬಳಗ | ಇಳಕಲ್ಲ |

**ಬಸವ ಬೆಳಗು ಕಾನೂನು ಸಲಹೆಗಾರರು**

| | |
|---|---|
| ಶ್ರೀ ತಾತಾಸಾಹೇಬ ಬಾಂಗಿ ವಕೀಲರು | ಜಮಖಂಡಿ |
| ಶ್ರೀ ಬಿ.ಎಲ್. ಪಾಟೀಲ ವಕೀಲರು, ಮಲಾಬಾದ | ಅಥಣಿ |
| ಶ್ರೀಮತಿ ಮಹಾದೇವಿ ಪ್ರಕಾಶ ಅಂಗಡಿ ವಕೀಲರು | ಹಳಿಯಾಳ |
| ಶ್ರೀ ವೀರೇಶ ತಡಕೋಡ ವಕೀಲರು | ಧಾರವಾಡ |

**ಸಂಪಾದಕರು ಪ್ರಕಾಶಕರು**

ಕಾರ್ಯದರ್ಶಿ, ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನ ಮಠ,
ಇಳಕಲ್ಲ–587125 ಜಿ. ಬಾಗಲಕೋಟೆ ಮೊ : 99721 42666

* * *

# ಬಸವ ಬೆಳಗಿನೊಳಗು



## ಲೇಖಕರಲ್ಲಿ ಬಿನ್ನಹ

* ಲೇಖನಗಳನ್ನು ಹಾಳೆಯ ಒಂದೇ ಮಗ್ಗುಲಿಗೆ ಬರೆದು ಕಳಿಸಬೇಕು
* ಲೇಖನಗಳ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಹೊಣೆಗಾರರು

## ಬಸವ ಬೆಳಗು ಚಂದಾ ದರಗಳು

| | | | |
|---|---|---|---|
| ೧. | ಹಿತಚಿಂತಕರು | – | ೨೫,೦೦೦ ರೂ. |
| ೨. | ಪೋಷಕರು | – | ೧೦,೦೦೦ ರೂ. |
| ೩. | ಐದು ವರ್ಷದ ಚಂದಾ | – | ೧,೦೦೦ ರೂ. |
| ೪. | ಬಿಡಿ ಸಂಚಿಕೆ | – | ೨೦ ರೂ. |

## ಚಂದಾ ಹಣ ಕಳಿಸುವ ವಿಳಾಸ :

(ಚಂದಾ ಹಣವನ್ನು ಚೆಕ್/ಡಿ.ಡಿ./ಎಂ.ಓ./ ಕಳಿಸಬೇಕು)

**ಕಾರ್ಯದರ್ಶಿ, ಬಸವಬೆಳಗು ತ್ರೈಮಾಸಿಕ ಪತ್ರಿಕೆ**

**ಚಿತ್ತರಗಿ ಸಂಸ್ಥಾನಮಠ, ಇಳಕಲ್ಲ – ೫೮೭ ೧೨೫. ಜಿ. ಬಾಗಲಕೋಟ**

॥ ಓಂ ಶ್ರೀ ಗುರು ಬಸವಲಿಂಗಾಯ ನಮಃ ॥

## ೨೦೨೪ನೇ ವರ್ಷದ ಬಸವಾದಿ ಶರಣರ ಶರಣೋತ್ಸವಗಳು

| | | | | | | |
|---|---|---|---|---|---|---|
| ಜನೇವರಿ | ೧೧ | ಗುರುವಾರ | – | ಎಳ್ಳ ಅಮವಾಸ್ಯೆ | – | ಒಕ್ಕಲಿಗ ಮುದ್ದಣ್ಣ |
| ಜನೇವರಿ | ೧೫ | ಸೋಮವಾರ | – | ಮಕರ ಸಂಕ್ರಮಣ | – | ಸಿದ್ಧರಾಮೇಶ್ವರ |
| ಜನೇವರಿ | ೨೫ | ಗುರುವಾರ | – | ಬನದ ಹುಣ್ಣಿವೆ | – | ಮೇದಾರ ಕೇತಯ್ಯ |
| ಫೆಬ್ರುವರಿ | ೦೧ | ಗುರುವಾರ | – | ಪ್ರತಿ ವರುಷ | – | ಮರುಳ ಶಂಕರದೇವ |
| ಫೆಬ್ರುವರಿ | ೦೯ | ಶುಕ್ರವಾರ | – | ಅವರಾತ್ರಿ ಅಮವಾಸ್ಯೆ | – | ಜೇಡರದಾಸಿಮಯ್ಯ |
| ಫೆಬ್ರುವರಿ | ೨೪ | ಶನಿವಾರ | – | ಭಾರತ ಹುಣ್ಣಿವೆ | – | ಕಿನ್ನರಿ ಬೊಮ್ಮಯ್ಯ |
| ಮಾರ್ಚ | ೦೮ | ಶುಕ್ರವಾರ | – | ಮಹಾಶಿವರಾತ್ರಿ | – | ಡೋಹರ ಕಕ್ಕಯ್ಯ |
| ಮಾರ್ಚ | ೨೫ | ಸೋಮವಾರ | – | ಹೋಳಿ ಹುಣ್ಣಿವೆ | – | ಬಿಬ್ಬಿ ಬಾಚಯ್ಯ |
| ಎಪ್ರಿಲ್ | ೦೯ | ಮಂಗಳವಾರ | – | ಯುಗಾದಿ ಪಾಡ್ಯ | – | ಅಲ್ಲಮಪ್ರಭು |
| ಎಪ್ರಿಲ್ | ೨೩ | ಮಂಗಳವಾರ | – | ದವನದ ಹುಣ್ಣಿವೆ | – | ಅಕ್ಕಮಹಾದೇವಿ |
| ಮೇ | ೧೦ | ಶುಕ್ರವಾರ | – | ಅಕ್ಷಯ ತೃತಿಯ | – | ಬಸವಣ್ಣನವರು |
| ಮೇ | ೨೩ | ಗುರುವಾರ | – | ಆಗಿ ಹುಣ್ಣಿವೆ | – | ಶಿವನಾಗಮಯ್ಯ |
| ಜೂನ್ | ೦೬ | ಗುರುವಾರ | – | ಬಾದಮಿ ಅಮವಾಸೆ | – | ಕುರುಬ ಗೊಲ್ಲಾಳೇಶ್ವರ |
| ಜೂನ್ | ೨೨ | ಶನಿವಾರ | – | ಕಾರ ಹುಣ್ಣಿವೆ | – | ಅಂಬಿಗ ಚೌಡಯ್ಯ |
| ಜುಲೈ | ೦೫ | ಶುಕ್ರವಾರ | – | ಮಣ್ಣೆತ್ತಿನ ಅಮವಾಸೆ | – | ಕುಂಬಾರ ಗುಂಡಯ್ಯ |
| ಜುಲೈ | ೨೧ | ರವಿವಾರ | – | ಕಡ್ಲಿಗಡಬ ಹುಣ್ಣಿವೆ | – | ಹಡಪದ ಅಪ್ಪಣ್ಣ |
| ಅಗಸ್ಟ | ೦೫ | ಸೋಮವಾರ | – | ಶ್ರಾವಣ ೧ನೇಸೋಮ | – | ಶಂಕರದಾಸಿಮಯ್ಯ |
| ಅಗಸ್ಟ | ೦೯ | ಶುಕ್ರವಾರ | – | ನಾಗರ ಪಂಚಮಿ | – | ಅಕ್ಕನಾಗಮ್ಮ |
| ಅಗಸ್ಟ | ೧೯ | ಸೋಮವಾರ | – | ನೂಲ ಹುಣ್ಣಿವೆ | – | ನುಲಿಯ ಚಂದಯ್ಯ |
| ಸೆಪ್ಟೆಂಬರ | ೦೭ | ಶನಿವಾರ | – | ಗಣೇಶ ಚೌತಿ | – | ಮಡಿವಾಳ ಮಾಚಿದೇವ |
| ಸೆಪ್ಟೆಂಬರ | ೧೮ | ಬುಧವಾರ | – | ಅನಂತನ ಹುಣ್ಣಿವೆ | – | ಹೂಗಾರ ಮಾದಣ್ಣ |
| ಅಕ್ಟೋಬರ | ೧೧ | ಶುಕ್ರವಾರ | – | ಮಹಾನವಮಿ | – | ಹರಳಯ್ಯ–ಮಧುವಯ್ಯ |
| ಅಕ್ಟೋಬರ | ೧೨ | ಶನಿವಾರ | – | ವಿಜಯದಶಮಿ | – | ಕಲ್ಯಾಣಕ್ರಾಂತಿ ವಿಜಯ |
| ಅಕ್ಟೋಬರ | ೧೭ | ಗುರುವಾರ | – | ಶೀಗಿ ಹುಣ್ಣಿವೆ | – | ಗಂಗಾಂಬಿಕೆ |
| ನವೆಂಬರ | ೦೨ | ಶನಿವಾರ | – | ದೀಪಾವಳಿ ಪಾಡ್ಯ | – | ಚೆನ್ನಬಸವಣ್ಣ |
| ನವೆಂಬರ | ೧೫ | ಶುಕ್ರವಾರ | – | ಗೌರಿ ಹುಣ್ಣಿವೆ | – | ನೀಲಾಂಬಿಕೆ |
| ಡಿಸೆಂಬರ | ೦೧ | ರವಿವಾರ | – | ಛಟ್ಟಿ ಅಮವಾಸ್ಯೆ | – | ದಾನಮ್ಮದೇವಿ |
| ಡಿಸೆಂಬರ | ೧೫ | ರವಿವಾರ | – | ಹೊಸ್ತಿಲ ಹುಣ್ಣಿವೆ | – | ಮಾದಾರ ಚೆನ್ನಯ್ಯ |
| ಡಿಸೆಂಬರ | ೩೦ | ಸೋಮವಾರ | – | ಎಳ್ಳ ಅಮವಾಸ್ಯೆ | – | ಒಕ್ಕಲಿಗ ಮುದ್ದಣ್ಣ |

### ವಚನ ಸಾಹಿತ್ಯ ಸಂಶೋಧಕರ ವಿಶೇಷ ಶರಣೋತ್ಸವಗಳು

| | | | | |
|---|---|---|---|---|
| ಫೆಬ್ರುವರಿ | ೧೮ | ರವಿವಾರ | – | ಶರಣ ಹರ್ಡೇಕರ ಮಂಜಪ್ಪನವರು |
| ಜುಲೈ | ೦೨ | ಮಂಗಳವಾರ | – | ಶರಣ ಫ.ಗು. ಹಳಕಟ್ಟಿಯವರು (ವಚನ ಸಾಹಿತ್ಯ ಸಂರಕ್ಷಣಾ ದಿನಾಚರಣೆ) |
| ಅಗಸ್ಟ | ೦೧ | ಗುರುವಾರ | – | ಚಿತರಗಿ– ಇಳಕಲ್ಲ ಮಹಾಂತ ಶಿವಯೋಗಿಗಳು (ಮಹಾಂತ ಜೋಳಿಗೆ–ವ್ಯಸನಮುಕ್ತ ದಿನಾಚಾರಣೆ) |
| ಅಗಸ್ಟ | ೩೦ | ಶುಕ್ರವಾರ | – | ಶರಣ ಎಂ.ಎಂ. ಕಲಬುರ್ಗಿಯವರು |
| ಅಕ್ಟೋಬರ | ೨೮ | ಸೋಮವಾರ | – | ಶರಣ ಉತ್ತಂಗಿ ಚೆನ್ನಪ್ಪನವರು |

**ಸಂಗ್ರಹ – ಪ್ರಕಟಣೆ : ಪ್ರೊ.ಸಿದ್ಧಣ್ಣ ಲಂಗೋಟಿ (ಚಾಂದಕವಠೆ)**

ಎಂ.ಎ. (ತತ್ವಜ್ಞಾನ), ಎಲ್.ಎಲ್.ಬಿ.(ಸ್ಪೆಶಲ್)
ಎಂ.ಎ.(ಹಿಂದಿ), ಎಂ.ಎ.(ಕನ್ನಡ), ಸಿ.ವಾಯ್.ಇಡಿ (ಯೋಗ)
**ಗೌ॥ ಸಂಪಾದಕರು, ಬಸವ ಬೆಳಗು, ಪತ್ರಿಕೆ, ರಾಮದುರ್ಗ, ಜಿ॥ ಬೆಳಗಾವಿ**

## ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ, ಇಳಕಲ್ಲ
## ಶ್ರಾವಣ ಮಾಸದ-ಶರಣಸಂಸ್ಕೃತಿ ಮಹೋತ್ಸವ
## (ದಿನಾಂಕ ೫-೮-೨೦೨೪ ರಿಂದ ೩-೯-೨೦೨೪ರ ವರೆಗೆ)




ಪೂಜ್ಯಶ್ರೀ ಗದಗ ಜಗದ್ಗುರುಗಳು, ಪೂಜ್ಯಶ್ರೀ ಕೂಡಲಸಂಗಮ ಜಗದ್ಗುರುಗಳು,
ಪೂಜ್ಯಶ್ರೀ ಗುರುಮಹಾಂತ ಸ್ವಾಮಿಗಳು, ಪೂಜ್ಯಶ್ರೀ ಬಸವರಾಜ ಸ್ವಾಮಿಗಳು.

## ವಿಶ್ವ ಬಸವಧರ್ಮ ಸಮಾವೇಶದಲ್ಲಿ ಪೂಜ್ಯರು



ಪೂಜ್ಯಶ್ರೀ ಗುಳೇದಗುಡ್ಡ ಜಗದ್ಗುರು ಬಸವರಾಜ ಪಟ್ಟದಾರ್ಯ ಮಹಾಸ್ವಾಮಿಗಳು,
ಪೂಜ್ಯರಾದ ಇಳಕಲ್ಲ, ಸತ್ತಿ, ಸಂತೆಕಡೂರ, ಜಮಖಂಡಿ, ಗುಳೇದಗುಡ್ಡ ಶ್ರೀಗಳವರು.

## ಶರಣಸಂಸ್ಕೃತಿ ಮಹೋತ್ಸವದಲ್ಲಿ-ಮಹಿಳಾ ಗೋಷ್ಠಿ




ಅಕ್ಕನಬಳಗ ಇಳಕಲ್ಲದ ಪೂಜ್ಯ ಶರಣೆಯರು, ಅಧ್ಯಕ್ಷರು ಹಾಗೂ ಸದಸ್ಯರು

## ಲಿಂಗವಂತ ಧರ್ಮಗ್ರಂಥ - ಬಹುಮಾನ ಸಮಾರಂಭ




ಪೂಜ್ಯರಾದ ಶ್ರೀಮನಿಪ್ರ ಮಲ್ಲಿಕಾರ್ಜುನ ಸ್ವಾಮಿಗಳು ಮುರುಘಾಮಠ, ಧಾರವಾಡ.
ಶ್ರೀ ಶಿವಣ್ಣ ಶರಣ್ಣವರ ಸಾಹಿತಿಗಳು, ಧಾರವಾಡ ಇವರಿಗೆ ಗೌ॥ ಸತ್ಕಾರ

# ಲಿಂಗವಂತ ಕಾಯಕ ಸಂಜೀವನಿ ಕಾರ್ಯಕ್ರಮ



ಪೂಜ್ಯ ಗುರುಮಹಾಂತ ಸ್ವಾಮಿಗಳು ಇಳಕಲ್ಲ, ಪೂಜ್ಯ ಮಲ್ಲಿಕಾರ್ಜುನ ಸ್ವಾಮಿಗಳು ಜನವಾಡ, ಪೂಜ್ಯ ಬಸವನವಲಿಂಗ ಶರಣರು ಸಂತೆಕಡೂರ, ಶ್ರೀ ವೆಂಕಟೇಶ ಸಾಕಾ, ಶ್ರೀ ವಿಶ್ವನಾಥ ಪಾಟೀಲ, ಶ್ರೀ ಅಮೃತ ದೇಸಾಯಿ ಮುಂತಾದ ಶರಣರು, ಕಾಯಕನಿಷ್ಠ ಶರಣ-ಶರಣೆಯರು

## ಗೌ॥ ಸತ್ಕಾರ

**ಪೂಜ್ಯಶ್ರೀ ಗುರುಮಹಾಂತ ಸ್ವಾಮಿಗಳು, ಚಿತ್ತರಗಿ ಸಂಸ್ಥಾನಮಠ, ಇಳಕಲ್ಲ.**
**ಪೂಜ್ಯಶ್ರೀ ಧರ್ಮಗುರು ಫೈಸಲ್‌ಪಾಷಾ, ಮುರ್ತುಜಾ ಖಾದ್ರಿ ದರ್ಗಾ, ಇಳಕಲ್ಲ.**



ಶ್ರೀ ಉಸ್ಮಾನಗಣಿ ಹುಮನಾಬಾದ, ಶ್ರೀ ಅಬ್ದುಲ್‌ರಜಾಕ ತಟಗಾರ ಮುಂತಾದ ಭಕ್ತರು.

## ಬಸವಾದಿ ಶರಣರ ವಚನ-ತಾಡೋಲೆ ಗ್ರಂಥಗಳ
## ಅಡ್ಡ ಪಲ್ಲಕ್ಕಿ ಮಹೋತ್ಸವ



ಪರಮಪೂಜ್ಯ ಗುರುಮಹಾಂತ ಸ್ವಾಮಿಗಳ ನೇತೃತ್ವದಲ್ಲಿ, ಸರ್ವಜನಾಂಗಗಳ ಭಕ್ತರು, ಅಕ್ಕನ ಬಳಗದ ತಾಯಂದಿರು.

## ಶರಣಸಂಸ್ಕೃತಿ ಉತ್ಸವ - ಪಾದಯಾತ್ರೆ - ಇಳಕಲ್ಲ ಪಟ್ಟಣದಲ್ಲಿ



ಇಳಕಲ್ಲ, ಶಿರೂರ, ಸತ್ತಿ, ಮನಗೂಳಿ, ಸಂತೆಕಡೂರ, ಮರೆಗುದ್ದಿ ಪೂಜ್ಯರು, ಹಾಗೂ ಬಸವಾದಿ ಶರಣರ ವೇಷದಲ್ಲಿ ವಿದ್ಯಾರ್ಥಿ-ವಿದ್ಯಾರ್ಥಿನಿಯರು.

॥ ಓಂ ಶ್ರೀ ಗುರು ಬಸವಲಿಂಗಾಯ ನಮಃ ॥

# ೧. ಯುಗಪುರುಷ ವಿ. ಸಿದ್ಧರಾಮಣ್ಣ ಶರಣರು

✡ **ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)** ಶರಣ ಸಾಹಿತಿಗಳು
ಗೌ॥ ಸಂಪಾದಕರು, 'ಬಸವ ಬೆಳಗು' ಮಹಾಂತೇಶ ನಗರ, ರಾಮದುರ್ಗ-೫೯೧ ೧೨೩.

[ಪರಮಪೂಜ್ಯ ವಿ. ಸಿದ್ಧರಾಮಣ್ಣ ಶರಣರು ಶ್ರಾವಣ ಸೋಮವಾರ ದಿನಾಂಕ ೧೨-೦೮-೨೦೨೪ ರಂದು ತಮ್ಮ ೧೦೪ನೇ ವಯಸ್ಸಿನಲ್ಲಿ ಬಸವ ಮಹಾಬಯಲಿನಲ್ಲಿ ಬಯಲಾದರು. ಪೂಜ್ಯರ ಕುರಿತು ವಿಶೇಷ ಲೇಖನವಿದು.]

**ಪ್ರಾಸ್ತಾವಿಕ :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ೧೨ನೇ ಶತಮಾನದ ಬಸವಾದಿ ಶರಣರ ಸಂತತಿಯ ಬಳಿವಿಡಿದು ಬಂದ ೨೦ನೇ ಶತಮಾನದ ನೂತನ ಶರಣರು. ಒಂದು ಶತಮಾನ ಕಾಲ ಬಸವತತ್ತ್ವವನ್ನು ಉಸಿರಾಗಿಸಿಕೊಂಡು ಬಾಳಿ ಬದುಕಿದವರು. ನಾಡಿನುದ್ದಗಲಕ್ಕೂ ಸಂಚರಿಸುತ್ತಾ ವಚನ ಸಂಗೀತ, ವಚನಾನುಭಾವ, ಶರಣರ ನಾಟಕ ಪದ್ಯಗಳ ರಚಿಸಿ, ಪ್ರಯೋಗಿಸುತ್ತಾ ಕೋಟ್ಯಾಂತರ ಬಸವಭಕ್ತರಲ್ಲಿ ಬಸವಪ್ರಜ್ಞೆಯನ್ನು ಜಾಗೃತ ಗೊಳಿಸಿದ ಗಣಾಚಾರದ ಧೀರ ಶರಣರಿವರು. ಬಸವಗುರು ನಿಷ್ಠೆ, ಇಷ್ಟಲಿಂಗ ನಿಷ್ಠೆ, ಶರಣ ಜಂಗಮ ನಿಷ್ಠೆ, ಬಸವಪ್ರಸಾದ ನಿಷ್ಠೆ ಅಂಗವಿಸಿಕೊಂಡಿದ್ದ ಶರಣರಾಗಿದ್ದರು. ಬಸವತತ್ತ್ವಕ್ಕಾಗಿ ಶ್ರಮಿಸುತ್ತಿದ್ದ ಇಂದಿನ ಶರಣ-ಶರಣೆಯರನ್ನು ಕಂಡಾಗ, **"ಶರಣರೇ ನಾವೆಲ್ಲ ೧೨ನೇ ಶತಮಾನದಲ್ಲಿ ಗುರುಬಸವಣ್ಣನವರ ಸಾನಿಧ್ಯದಲ್ಲಿ ಕಲ್ಯಾಣದ ಅನುಭವ ಮಂಟಪದಲ್ಲಿ ಇದ್ದವರೇ, ೭೭೦ ವರುಷಗಳ ನಂತರ ಮರಳಿ ಬಂದವರೇ ಆಗಿದ್ದೇವೆ. ಅಂದು ಕಲ್ಯಾಣಕ್ರಾಂತಿ ಜರುಗಿ, ಅರ್ಧಕ್ಕೆ ನಿಂತಿದ್ದ ಅಪ್ಪ ಬಸವಣ್ಣನವರ ಕಾರ್ಯ ಮುಂದುವರೆಸಲು ಬಂದವರಾಗಿದ್ದೇವೆ. ನಿರಾಶರಾಗದೇ ಧೈರ್ಯದಿಂದ ಕಾರ್ಯ ಮಾಡೋಣ"** ಎಂದು ಪ್ರೋತ್ಸಾಹಿಸುತ್ತಾ ಮಹಾಜ್ಞಾನಿ ಚೆನ್ನಬಸವಣ್ಣನವರ **ಕಾಲಜ್ಞಾನ ವಚನವನ್ನು** ಕಂಚಿನ ಕಂಠದಿಂದ ಹೇಳುತ್ತಿದ್ದರು.

ಧರೆ ಹೆಚ್ಚಿ, ಕಲಿ ಹೆಚ್ಚಿ, ರಾಜ ರಾಜರಳಿದು,
ನೀತಿಯ ತಪ್ಪಿ ಕೀಳಾದ ಜನಕ್ಕೆ
ಏಳಿಗೆಯನಿತ್ತು ಉರವಣಿಪ ಕಾಲಕ್ಕೆ
ಶರಣರು ಬಂದಾರು ಎನ್ನಿ.
ಕಲ್ಯಾಣ ಪಟ್ಟಣವು ಕಟ್ಟೀತು !
ಘನವೈಭವದಿ ಮೆರೆದೀತು !
ದಿಕ್ಕು ದಿಕ್ಕಿಗೆ ಬಸವಧ್ವಜ ಮೆರೆದಾವು
ಇದು ಸತ್ಯ, ಇದು ಸತ್ಯ, ಇದು ಸತ್ಯ
ಕೂಡಲಚೆನ್ನಸಂಗಮದೇವಾ.

**ವಿ. ಸಿದ್ಧರಾಮಣ್ಣ ಶರಣರ ಜನನ-ಬಾಲ್ಯ-ಶಿಕ್ಷಣ :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರ ಪೂರ್ವಜರದ್ದು ಅಂದಿನ ಬಳ್ಳಾರಿ ಜಿಲ್ಲೆಯ (ಇಂದಿನ ವಿಜಯನಗರ ಜಿಲ್ಲೆಯ) ಹರಪನಹಳ್ಳಿ ತಾಲೂಕಿನ ಮತ್ತಿಹಳ್ಳಿ ಗ್ರಾಮವಾಗಿದೆ. ಅಲ್ಲಿಯ ಶರಣ ಸಂಸ್ಕೃತಿಯ ಹಾಲುಮತ ಜನಾಂಗದ ಕೃಷಿ ಕಾಯಕ ಮನೆತನದ ಕಾಯಕಯೋಗಿ ೧೦೫ ವರುಷದ ಅಜ್ಜ ನೀಲಜ್ಜ ಈ ಮನೆತನದ ಹಿರಿಯ ಯಜಮಾನರಾಗಿದ್ದರು. ಈ ಅಜ್ಜನ ಮಗಳು ತಿಂದಮ್ಮ. ಇವಳಿಗೆ ಅಡವಿಬಸಮ್ಮ ಹಾಗೂ ಕಾಡಮ್ಮ ಎಂಬ ಇಬ್ಬರು ಹೆಣ್ಣುಮಕ್ಕಳು. ಇವರಿಬ್ಬರನ್ನೂ ಅದೇ ಊರಿನ ಕಾಳಪ್ಪ ಮಡ್ಡೇರ ಎಂಬ ಸದ್ಗುಣಶೀಲ, ಸಂಗೀತ ನಾಟಕ ಕಲಾವಿದ, ಯುವಕನಿಗೆ ಕೊಟ್ಟು ಮದುವೆ ಮಾಡಿದ್ದರು.

ಹಾಲುಮತ ಜನಾಂಗದ ಶರಣದಂಪತಿಗಳಾಗಿದ್ದ ಶ್ರೀ ಕಾಳಪ್ಪ ಮಡ್ಡೇರ ಹಾಗೂ ಶ್ರೀಮತಿ ಕಾಡಮ್ಮನವರ ಉದರದಲ್ಲಿ ದಿನಾಂಕ **೧೪-೦೧-೧೯೨೦** ಸಂಕ್ರಮಣದಂದು ಜನಿಸಿದ ಪುತ್ರರತ್ನವೇ ಪೂಜ್ಯ ವಿ. ಸಿದ್ಧರಾಮಣ್ಣ ಶರಣರು. ಇವರ ಬಾಲ್ಯದ ಹೆಸರು **ಶಿವರಾಮ**. ಇಬ್ಬರು ತಾಯಂದಿರ ಮಾತೃವಾತ್ಸಲ್ಯ, ಅಜ್ಜ-ಅಜ್ಜಿಯರ ಮಮತೆಯಲ್ಲಿ, ತಂದೆಯ ಮಾರ್ಗದರ್ಶನಲ್ಲಿ ಬಾಲಕ 'ಶಿವರಾಮ' ಬಿದಿಗೆಯ ಚಂದ್ರನಂತೆ ಬೆಳೆಯತೊಡಗಿದ.

ಶಿವರಾಮನಿಗೆ ೫-೬ ವರುಷ ತುಂಬುತ್ತಲೇ ಮತ್ತಿಹಳ್ಳಿಯಲ್ಲಿದ್ದ **'ಸಾಲಿಮಠ'**ದ ಅಯ್ಯನವರಲ್ಲಿ ವಿದ್ಯಾಭ್ಯಾಸಕ್ಕೆ ಸೇರಿಸಿದರು. ಅಲ್ಲಿ ಮಠದ ಶರಣಯ್ಯ ಹಾಗೂ ಶಿವರುದ್ರಯ್ಯನವರು ಸಾಲಿಮಠದ ಅಂಗಳದಲ್ಲಿ ಹರಡಿದ್ದ ಉಸುಕಿನ ಮೇಲೆ ತೋರು ಬೆರಳು ಹಿಡಿದು 'ಓಂ ನಮಃ ಶಿವಾಯ ಸಿದ್ಧಂನಾಮ' ಎಂದು ತೀಡಿ ತೀಡಿ ಬರೆಯಿಸಿ; ಅ. ಆ. ಇ. ಈ ಅಕ್ಷರಾಭ್ಯಾಸ ಪ್ರಾರಂಭ ಮಾಡಿಸಿದರು. ಮುಂದೆ ಒಂದೇ ವರುಷದಲ್ಲಿ ಊರಿಗೆ ಸರಕಾರಿ ಶಾಲೆ ಬಂದಿತು. ಶಾಲೆಗೆ ಸ್ವತಂತ್ರ ಕಟ್ಟಡವಿರಲಿಲ್ಲ. ಆಗ ಊರಲ್ಲಿಯ ಸಿದ್ಧೇಶ್ವರ ದೇವಸ್ಥಾನ (ಗುಡಿ)ಯಲ್ಲಿ ಶಾಲೆ ಆರಂಭವಾಯಿತು. ಪ್ರಥಮ ಗುರುಗಳಾಗಿ ಶಿಗ್ಲಿಯ ಶಿವಯ್ಯನವರು ಬಂದರು. ಅನಂತರ ಕಂಚೂರಿನ ಮುರುಘೇಂದ್ರಯ್ಯ ಶಿಕ್ಷಕರಾಗಿ ಬಂದರು. ೧ ರಿಂದ ೫ನೇ ಇಯತ್ತೆ (ಕ್ಲಾಸು)ವರೆಗೆ ಶಿಕ್ಷಣ ನಡೆಯಿತು. ಶ್ರೀ ಚರಂತಿಮಠ ಎಂಬ ಶಿಕ್ಷಕರು ಶಾಲಾ ಗ್ರಂಥಾಲಯದ ಮೇಲುಸ್ತವಾರಿ ಮಾಡುತ್ತಾ, ವಿದ್ಯಾರ್ಥಿಗಳಲ್ಲಿ ಕಥೆ, ಕವಿತೆ, ಕಾದಂಬರಿ ಓದುವ ಹವ್ಯಾಸ-ಅಭಿರುಚಿ ಬೆಳೆಸಿದರು.

ತಂದೆ ಕಾಳಪ್ಪನವರು ಕರ್ನಾಟಕ ಸಂಗೀತದ ೩೨ ರಾಗಗಳಲ್ಲಿ ನಿಪುಣರಾಗಿದ್ದ ಸಂಗೀತಗಾರರಾಗಿದ್ದು, ಹವ್ಯಾಸಿ ನಾಟಕ ಕಲಾವಿದರೂ ಆಗಿದ್ದು, ನಾಟಕ ಸಂಘ ಕಟ್ಟಿ ಹರಿಶ್ಚಂದ್ರ, ಹೇಮರಡ್ಡಿ ಮಲ್ಲಮ್ಮ, ಬಡತನ ಭೂತ ಮುಂತಾದ ನಾಟಕ ಆಡಿಸುತ್ತಿದ್ದರು. ಬಾಲ್ಯದಿಂದಲೇ ಶಿವರಾಮನು ತಂದೆಯವರಿಂದ ಸಂಗೀತ, ಪಿಯಾನೊ, ಪೇಟಿ ಬಾರಿಸುವುದು, ನಾಟಕಗಳಲ್ಲಿ ಮಕ್ಕಳ ಪಾತ್ರ ಮಾಡುವುದನ್ನು ಕಲಿತರು. ೫ನೇ ತರಗತಿ ಶಿಕ್ಷಣ ಪಾಸಾದರು. ಮುಂದಿನ ಶಿಕ್ಷಣಕ್ಕೆ ಹರಪನಹಳ್ಳಿಗೆ ಹೋಗಬೇಕಾಗಿತ್ತು. ಆದರೆ ಮನೆಯಲ್ಲಿ ದೊಡ್ಡವ್ವನ ಮಕ್ಕಳಾದ ರಾಮಣ್ಣ ಹಾಗೂ ಪರಶುರಾಮಣ್ಣ ಅಕಾಲ

ಮರಣಕ್ಕೆ ತುತ್ತಾದರು. ಒಕ್ಕಲುತನ ಮಾಡಲು ತರುಣರು ಇಲ್ಲದ್ದರಿಂದ, ತಾಯಿ ಹಾಗೂ ದೊಡ್ಡವ್ವರೊಂದಿಗೆ ಯುವಕ ಶಿವರಾಮ ಮುಂದಿನ ಶಿಕ್ಷಣಕ್ಕೆ ಹೋಗದೇ ದುಡಿಯಲು ನಿಂತರು. ತಂದೆ ಕಾಳಪ್ಪ ಸಂಗೀತ ನಾಟಕ ಮಾಸ್ತರಾಗಿ ಸುತ್ತ-ಮುತ್ತಲ ಊರೂರು ತಿಂಗಳಾನುಟ್ಟಲೇ ನಾಟಕ ಕಲಿಸಲು ಹೋಗುತ್ತಿದ್ದರು.

ಶಿವರಾಮನು ತಾಯಂದಿರೊಂದಿಗೆ ಒಕ್ಕಲತನ ಜವಾಬ್ದಾರಿ ನಿಭಾಯಿಸುತ್ತಲೇ, ಸಂಜೆ, ರಾತ್ರಿ ಸಿದ್ಧೇಶ್ವರ ಗುಡಿಯಲ್ಲಿ ಭಜನಾ ಸಂಘ ಕಟ್ಟಿ, ಯುವಕರೊಂದಿಗೆ ಭಜನಾ ಪದ ಹಾಡುತ್ತಾ, ಗೆಳೆಯರಿಗೆಲ್ಲ ಪದಗಳನ್ನು ಕಲಿಸುತ್ತಾ ಬೆಳೆದನು.

**ದಾಂಪತ್ಯ ಜೀವನ :** ೨೫ರ ತರುಣ ಶಿವರಾಮನಿಗೆ ಇಂದಿನ ಹಗರಿಬೊಮ್ಮನಹಳ್ಳಿ ತಾಲೂಕಿನ ಕೋಗಳಿ ಗ್ರಾಮದ ಶ್ರೀ ಬಸಪ್ಪ ಕೋಲ್ಕಾರ ಹಾಗೂ ಶ್ರೀಮತಿ ಕರೆಮ್ಮ ದಂಪತಿಗಳ ಮಗಳು ಚಿ॥ ಕಾಳಮ್ಮ ಎಂಬ ಕನ್ಯೆಯೊಂದಿಗೆ ವಿವಾಹ ಮಾಡಿದರು. ಶ್ರೀ ಶಿವರಾಮ ಹಾಗೂ ಕಾಳಮ್ಮ ದಂಪತಿಗಳದು ಹಾಲು-ಜೇನಿನಂತಹ ಸಂಸಾರವಾಗಿತ್ತು. ೧೨ ವರುಷಗಳ ಸುಮಧುರ ದಾಂಪತ್ಯ ಜೀವನದಲ್ಲಿ ಮಲ್ಲಿಕಾರ್ಜುನ, ನಾಗರಾಜ, ಕೊಟ್ರೂರೇಶ ಎಂಬ ಮೂವರು ಮಕ್ಕಳು ಜನಿಸಿದರು. ಮಕ್ಕಳನ್ನು ಊರಲ್ಲಿಯ ಕನ್ನಡ ಶಾಲೆಯಲ್ಲಿ ಓದಿಸುತ್ತ-ಬೆಳೆಸತೊಡಗಿದರು.

ಶಿವರಾಮಣ್ಣನವರು ಗೃಹಸ್ಥ ಜೀವನ ಸಾಗಿಸುತ್ತಲೇ ಬಳ್ಳಾರಿ ಜಿಲ್ಲೆಯ ಅನೇಕ ಗ್ರಾಮಗಳಿಗೆ ಸಂಗೀತ ನಾಟಕ ಕಲಿಸಲು, ಆಡಿಸಲು ಹೋಗಿ ಬರುತ್ತಿದ್ದರು. ಸುತ್ತ-ಮುತ್ತಲಿನ ಹಲವಾರು ಊರುಗಳಲ್ಲಿ ಅವರ ಗೆಳೆಯರ ಬಳಗ, ನಾಟಕ-ಸಂಗೀತದ ಹವ್ಯಾಸಿ ಕಲಾವಿದರ ಗುಂಪುಗಳೇ ತಯಾರಾಗಿದ್ದವು.

**ಶಿವರಾಮಣ್ಣ-ಸಿದ್ಧರಾಮಣ್ಣ ಶರಣರಾಗಿ ಪರಿವರ್ತನೆ :** ೧೯೬೦ರ ಇಸ್ವಿಯ ಕಾಲಕ್ಕೆ ಇವರ ಸ್ನೇಹಿತರಾಗಿದ್ದ ಡಾ. ಕೆ. ಎಸ್. ವೀರಣ್ಣ ಸಾ॥ ದಶಮಾಪುರ ಇವರು ಮತ್ತಿಹಳ್ಳಿಗೆ ಬಂದು ತಮ್ಮ ಗ್ರಾಮದಲ್ಲಿಯ ಆಯುರ್ವೇದ ಔಷಧಿ ಕೊಡುವ ಒಂದು ಆಸ್ಪತ್ರೆ ಉದ್ಘಾಟಿಸಲು ಶಿವರಾಮಣ್ಣನವರನ್ನು ಕರೆದುಕೊಂಡು ಹೋಗಿದ್ದರು. ಬಡವ-ಬಲ್ಲಿದರೆನ್ನದೆ ಹಳ್ಳಿಗಳ ಜನತೆಗೆ ವೈದ್ಯರಾಗಿ ಉಚಿತ ಔಷಧ ದಾಸೋಹ ನಡೆಸುತ್ತಿದ್ದರು. ಡಾ॥ ಕೆ. ಎಸ್. ವೀರಣ್ಣನವರು ೧೯೬೨ರಲ್ಲಿ ಬಸವತತ್ವದ ಪ್ರವಚನಕಾರರಾಗಿದ್ದ ಪೂಜ್ಯ ಶ್ರೀ ಲಿಂಗಾನಂದ ಸ್ವಾಮಿಗಳವರನ್ನು ದಶಮಾಪುರಕ್ಕೆ ಪ್ರವಚನಕ್ಕೆ ಆಮಂತ್ರಿಸಿದ್ದರು. ಅದೇ ಕಾಲಕ್ಕೆ ಸಂಗೀತಗಾರರಾಗಿದ್ದ ಶಿವರಾಮಣ್ಣನವರನ್ನೂ ತಮ್ಮ ಗ್ರಾಮಕ್ಕೆ ಬರಲು ಕೇಳಿಕೊಂಡಿದ್ದರು. ಅಲ್ಲಿ ಪೂಜ್ಯರ ಬಸವತತ್ವ ಪ್ರವಚನ, ಪ್ರಾರಂಭದಲ್ಲಿ ಶಿವರಾಮಣ್ಣ-ನವರಿಂದ ವಚನ ಸಂಗೀತ, ಬಸವಣ್ಣನವರ ಕುರಿತಾದ ಜಾನಪದ ಗೀತೆಗಳ ಗಾಯನ, ಅದ್ಭುತವಾಗಿ ಒಂದು ವಾರ ಕಾರ್ಯಕ್ರಮ ಜರುಗಿದವು. ಪೂಜ್ಯ ಶ್ರೀ ಲಿಂಗಾನಂದ ಸ್ವಾಮಿಗಳು ದಾವಣಗೆರೆ ಭಾಗದ ಯಾವ ಯಾವ ಊರು-ಪಟ್ಟಣಗಳಲ್ಲಿ ಪ್ರವಚನ ಮಾಡುತ್ತಿದ್ದರೋ ಅಲ್ಲಿಗೆಲ್ಲ ಶಿವರಾಮಣ್ಣನವರನ್ನು ಕರೆಯಿಸಿಕೊಂಡು ವಚನ ಸಂಗೀತ, ಬಸವಗುರು ಪ್ರಾರ್ಥನೆ ಮಾಡಿಸತೊಡಗಿದರು.

**ಪೂಜ್ಯಶ್ರೀ ಲಿಂಗಾನಂದ ಸ್ವಾಮಿಗಳು** ದಾವಣಗೆರೆಯಲ್ಲಿ ೧೯೬೩ ರಲ್ಲಿ ೯ ಎಕರೆ ಜಮೀನು ಖರೀದಿಸಿ, "ವಿಶ್ವಕಲ್ಯಾಣ ಮಂಟಪ" ಹೆಸರಿನ ಒಂದು ಕಟ್ಟಡ ನಿರ್ಮಿಸಿ, ೧೯೬೪ ಬಸವ ಜಯಂತಿಯಂದು ಉದ್ಘಾಟನೆ ಮಾಡಿದರು. ಆ ಕಾಲಕ್ಕೆ ಪೂಜ್ಯರಾದ ದಾವಣಗೆರೆಯ ಬಸವ ಭಕ್ತರಾಗಿದ್ದ ಶ್ರೀ ಮಾಗನೂರ ಬಸಪ್ಪನವರು ಹಾಗೂ ದಾವಣಗೆರೆಯ ಅನೇಕ ಭಕ್ತರು ಸಂಪೂರ್ಣ ಸಹಾಯ-ಸಹಕಾರ ನೀಡಿದರು. ಪೂಜ್ಯ ಲಿಂಗಾನಂದ ಸ್ವಾಮಿಗಳ ಹತ್ತಿರ ಅವರ ಪ್ರವಚನ ಪ್ರಭಾವಕ್ಕೊಳಗಾಗಿ ಕುಂದಗೋಳದ ಶ್ರೀ ಶೇಖರಗೌಡ, ಮಲೆಬೆನ್ನೂರಿನ ಶ್ರೀ ಶಿವಾನಂದ ಗುರೂಜಿ, ತೇರದಾಳದ ಶ್ರೀ ಮಲ್ಲೇಶಪ್ಪ ಶರಣರು, ಮಹಾಲಿಂಗಪೂರದ ಶ್ರೀ ಬಾಲಚಂದ್ರ ಚೆನ್ನಿ ಮುಂತಾದ ಬಸವ ಭಕ್ತರು ಬಂದಿದ್ದರು. ಈ ಬಳಗದಲ್ಲಿ ಮತ್ತಿಹಳ್ಳಿಯ ಶಿವರಾಮಣ್ಣನವರು ಸೇರಿಕೊಂಡರು.

೧೯೬೫ನೇ ಇಸ್ವಿಯಲ್ಲಿ ಚಿತ್ರದುರ್ಗದಲ್ಲಿ ತರಳಬಾಳು ಹುಣ್ಣಿಮೆ ಮಹೋತ್ಸವ ಕಾರ್ಯಕ್ರಮ ಆಯೋಜಿಸಲ್ಪಟ್ಟಿತ್ತು. ಸಿರಿಗೆರೆಯ ಪರಮಪೂಜ್ಯ ಹಿರಿಯ ಜಗದ್ಗುರು ಗಳವರಾದ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸನ್ನಿಧಾನದಲ್ಲಿ ಪೂಜ್ಯಶ್ರೀ ಲಿಂಗಾನಂದ ಸ್ವಾಮಿಗಳವರಿಂದ ಒಂದು ವಾರ ಅಕ್ಕನ ಪ್ರವಚನ ಜರುಗಿತು. ಈ ಪ್ರವಚನದ ಪ್ರಭಾವಕ್ಕೊಳಗಾದ ಚಿತ್ರದುರ್ಗದಲ್ಲಿ ಬಿ.ಎಸ್‌ಸಿ. ಓದುತ್ತಿದ್ದ ವಿದ್ಯಾರ್ಥಿನಿ (ಡಾ. ಬಸಪ್ಪನವರು ಹಾಗೂ ಶರಣೆ ಗಂಗಮ್ಮನವರ ಪುತ್ರಿ) ಕು॥ ರತ್ನಮ್ಮ ಎಂಬವರು ಅಕ್ಕಮಹಾದೇವಿಯಂತೆ ವೈರಾಗ್ಯ ಜೀವನದಲ್ಲಿ ಅಧ್ಯಾತ್ಮ ಸಾಧನೆ ಮಾಡಬೇಕೆಂಬ ಹಂಬಲವುಳ್ಳವರಾಗಿ, ಚಿತ್ರದುರ್ಗದಿಂದ ದಾವಣಗೆರೆ "ವಿಶ್ವಕಲ್ಯಾಣ ಮಂಟಪ" ಆಶ್ರಮಕ್ಕೆ ಆಗಾಗ ಬಂದು ಪೂಜ್ಯ ಲಿಂಗಾನಂದ ಸ್ವಾಮಿಗಳವರೊಂದಿಗೆ ಅಧ್ಯಾತ್ಮದ ಚರ್ಚೆ ನಡೆಸಿ ಹೋಗುತ್ತಿದ್ದರು. ಬಿ.ಎಸ್‌ಸಿ. ಪರೀಕ್ಷೆ ಮುಗಿದ ನಂತರ ಬಂದು 'ಇಷ್ಟಲಿಂಗ ದೀಕ್ಷೆ' ಪಡೆಯಿರಿ ಎಂದು ಗುರುಗಳು ಆದೇಶಿಸಿದರು.

೧೯೬೫ ನೇ ಇಸ್ವಿ ಬಸವ ಜಯಂತಿಯ ದಿನ ಸುಪ್ರಭಾತ ಸಮಯದಲ್ಲಿ ದಾವಣಗೆರೆ ವಿಶ್ವಕಲ್ಯಾಣ ಮಂಟಪದಲ್ಲಿ- ಮೊದಲಿಗೆ ಮತ್ತಿಹಳ್ಳಿಯ ಶ್ರೀ ಶಿವರಾಮಣ್ಣ-ನವರಿಗೆ ಇಷ್ಟಲಿಂಗ ಸಂಸ್ಕಾರ ಕರುಣಿಸಿ-ಇಂದಿನಿಂದ ನೀವು **"ವಿಶ್ವಕಲ್ಯಾಣದ ಸಿದ್ಧರಾಮಣ್ಣ"** ಎಂದು ನೂತನ ಅಭಿದಾನ ಮಾಡಿದರು. ಅನಂತರ ಚಿತ್ರದುರ್ಗದ ಕು॥ ರತ್ನಮ್ಮಳಿಗೆ ಇಷ್ಟಲಿಂಗ ದೀಕ್ಷೆಯನ್ನಿತ್ತು- ನೀವು **"ಮಾತೆ ಮಹಾದೇವಿ"** ಎಂದು ನೂತನ ಹೆಸರು ಅಭಿದಾನ ಮಾಡಿದರು.

ಪೂಜ್ಯಶ್ರೀ ಸದ್ಗುರು ಲಿಂಗಾನಂದ ಸ್ವಾಮಿಗಳವರಿಂದ ಬಸವಧರ್ಮ ಸಂಸ್ಕಾರ ಪಡೆದ ಈ ಅಧ್ಯಾತ್ಮ ಸಾಧಕರು- ತಮ್ಮ ಜೀವನದಲ್ಲಿ ಸಾಧಿಸಿದ ಸಾಧನೆಯನ್ನು ನಾಡಿನ ಬಸವಭಕ್ತರೆಲ್ಲ ಬಲ್ಲರು. ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ಬಸವಾನು-ಭಾವಿಯಾಗಿ ಲಿಂಗಾಯತ ಧರ್ಮಕೇಂದ್ರ ಬಸವಕಲ್ಯಾಣದ ನೂತನ ಅನುಭವ ಮಂಟಪದ ಆಜೀವ ಸಂಚಾಲಕರಾಗಿ (೧೯೮೦-೨೦೨೪) ಅಖಂಡ ೪೪ ವರುಷಗಳ

ಕಾಲ ಬಸವತತ್ತ್ವ ಪ್ರಸಾರದ ಮಹಾಮಣಿಹ ಪೂರೆಸಿದರು. ಪೂಜ್ಯ ಮಾತೆ ಮಹಾದೇವಿಯವರು ಧಾರವಾಡದ ಜಗನ್ಮಾತಾ ಅಕ್ಕಮಹಾದೇವಿ ಅನುಭಾವಪೀಠದ ಪ್ರಥಮ ಮಹಿಳಾ ಜಗದ್ಗುರುವಾಗಿ, ಲಿಂಗಾಯತ ಧರ್ಮ ಕ್ಷೇತ್ರ ಕೂಡಲಸಂಗಮದ ಬಸವಧರ್ಮ ಪೀಠದ ದ್ವಿತೀಯ ಮಹಾಜಗದ್ಗುರುವಾಗಿ ೪-೫ ದಶಕಗಳ ಕಾಲ ಬಸವತತ್ತ್ವ ಪ್ರಸಾರದ ಮಹಾಮಣಿಹ ಪೂರೈಸಿದರು. ಇವರಿಬ್ಬರಿಗಿಂತ ಮುಂಚೆಯೆ ೧೯೬೭ ಜನೇವರಿ ೩೦ ರಂದು ದಾವಣಗೆರೆಯಲ್ಲಿ ಪೂಜ್ಯಶ್ರೀ ಲಿಂಗಾನಂದ ಸ್ವಾಮಿಗಳಿಂದ ಇಷ್ಟಲಿಂಗ ದೀಕ್ಷೆ ಹೊಂದಿ ವಿಶ್ವಕರ್ಮ ಜನಾಂಗದ ಮಲೆಬೆನ್ನೂರಿನ ಶ್ರೀ ಚಂದ್ರಶೇಖರಾಚಾರಿ ಎಂಬ ತರುಣ **'ಶಿವಾನಂದ'** ಎಂಬ ನೂತನ ಅಭಿದಾನಹೊಂದಿ, ಕುಂಬಳೂರಿನಲ್ಲಿ 'ಬಸವಗುರುಕುಲ' ಶಿಕ್ಷಣ ಸಂಸ್ಥೆ ಸ್ಥಾಪಿಸಿ ಸಹಸ್ರಾರು ಗ್ರಾಮೀಣ ಮಕ್ಕಳಿಗೆ ಶಿಕ್ಷಣ ದಾಸೋಹ ಗೈದು, ಈಗ ದಾವಣಗೆರೆ ಹತ್ತಿರ ಶಿರಮಗೊಂಡನಹಳ್ಳಿಯಲ್ಲಿ 'ಬಸವಗುರು ತಪೋವನ' ನಿರ್ಮಿಸಿ ತಮ್ಮ ೮೮ನೇ ವಯಸ್ಸಿನಲ್ಲಿಯೂ ತಮ್ಮ ಧರ್ಮಪತ್ನಿ ಶರಣೆ ಸುಮಂಗಲಾದೇವಿಯೊಂದಿಗೆ ಬಸವಭಕ್ತರಿಗೆಲ್ಲ ಬಸವ ಸಂದೇಶ ಸಾರುತ್ತಾ 'ಹಂಸಯೋಗಿ'ಯಾಗಿ ಇಷ್ಟಲಿಂಗ ಯೋಗ ಸಾಧನೆಯಲ್ಲಿ ನಿರತರಾಗಿದ್ದಾರೆ.

**ಮತ್ತಿಹಳ್ಳಿಯಲ್ಲಿ ಜಗದ್ಗುರು ಬಸವಜಯಂತಿ ಆಚರಣೆ :** ೧೯೬೦-೬೧ರಲ್ಲಿಯೇ ಪೂಜ್ಯ ಲಿಂಗಾನಂದ ಸ್ವಾಮಿಗಳವರ ಹಾಗೂ ಡಾ. ಕೆ.ಎಸ್. ವೀರಣ್ಣನವರ ಸಂಪರ್ಕದಿಂದ ಬಸವ ವಚನಗಳ ಪ್ರಭಾವಕ್ಕೊಳಗಾಗಿದ್ದ ಸಿದ್ಧರಾಮಣ್ಣ ಶರಣರು ತಮ್ಮ ಹುಟ್ಟೂರಾದ ಮತ್ತಿಹಳ್ಳಿ ಗ್ರಾಮದಲ್ಲಿ 'ಬಸವ ಜಯಂತಿ' ಆಚರಿಸಲು ನಿರ್ಧರಿಸಿ, ೧೯೬೫ ರಲ್ಲಿಯೇ 'ಜಗದ್ಗುರು ಬಸವೇಶ್ವರ ಜಯಂತ್ಯುತ್ಸವ' ಎಂಬ ಕರಪತ್ರಿಕೆ ಮುದ್ರಣ ಹಾಕಿಸಿ ಸುತ್ತಲಿನ ಗ್ರಾಮಗಳಲ್ಲೆಲ್ಲಾ ಹಂಚಿ, ೧೦೧ ಜತೆ ಎತ್ತಿನ ಬಂಡಿ ಹೂಡಿ, ವೈಭವದಿಂದ ಬಸವ ಜಯಂತಿ ಆಚರಿಸಲು ನಿರ್ಧರಿಸಿದರು. ಗ್ರಾಮದ ಎಲ್ಲ ಸಮಾಜಗಳ ಮುಖಂಡರು, ಭಕ್ತರು ಭಾಗವಹಿಸಿದರು. ಇವರು ಮುದ್ರಿಸಿದ್ದ ಕರಪತ್ರ ನೋಡಿದ್ದ ಒಬ್ಬ ಗುರುಗಳು ಮತ್ತಿಹಳ್ಳಿಗೆ ಬಂದು, ಸಿದ್ಧರಾಮಣ್ಣನವರನ್ನು ಕರೆಯಿಸಿ 'ಬಸವಣ್ಣನಿಗೆ ಜಗದ್ಗುರು' ಎಂದು ಬರೆದಿರುವಿರಲ್ಲಾ, ಅದನ್ನು ಬದಲಿಸಿರಿ ಎಂದಾಗ, ಸಿದ್ಧರಾಮಣ್ಣನವರು 'ಮಹಾಮಹಿಮ ಸಂಗನಬಸವಣ್ಣ ಎನಗೆಯೂ ಗುರು, ನಿನಗೆಯೂ ಗುರು, ಜಗವೆಲ್ಲಕ್ಕೆಯೂ ಗುರು ಕಾಣಾ ಗುಹೇಶ್ವರ' ಎಂಬ ಅಲ್ಲಮಪ್ರಭುದೇವರ ವಚನ ಹೇಳಿ ಅವರಿಗೆ ಉತ್ತರಿಸಿದರು. ಆ ಸ್ವಾಮಿಗಳು ಅಲ್ಲಿಂದ ಮೌನವಾಗಿ ತಮ್ಮೂರಿಗೆ ವಾಪಸ್ಸು ಹೋದರು.

ಅದೇ ದಿನ ಸಂಜೆ ಶರಣ ಸಿದ್ಧರಾಮಣ್ಣನವರು ಮನೆಗೆ ಬಂದು ಸ್ನಾನ-ಲಿಂಗ ಪೂಜೆ ಮಾಡಿಕೊಂಡು- 'ಜಯಗುರು ಜಯಗುರು ಬಸವಣ್ಣ, ಜಯತು ಜಗದ್ಗುರು ಬಸವಣ್ಣ' ಎಂಬ ಪದ್ಯವನ್ನು ಬರೆದು ಭಾವತುಂಬಿ ಹಾಡಿದರು. ಸಿದ್ಧೇಶ್ವರ ಗುಡಿಯಲ್ಲಿಯ ತಮ್ಮ ಭಜನಾ ಮಂಡಳಿಯವರಿಗೆಲ್ಲ ಹಾಡಿಸಿ, ಬಸವ ಜಯಂತಿಯ ದಿನ ವೈಭವದಿಂದ ಬಸವ ಜಯಂತಿ ಆಚರಿಸಿ- 'ಬಸವಗುರು ಮಂಗಲ ಪದ್ಯ ಹಾಡಿದರು.

## ಗುರು ಬಸವ ಮಂಗಲ

ಜಯ ಗುರು ಜಯ ಗುರು ಬಸವಣ್ಣ
ಜಯತು ಜಗದ್ಗುರು ಬಸವಣ್ಣ ॥ಪ॥
ಜಂಗಮ ರೂಪನೆ ಬಸವಣ್ಣ
ಜಗದೋದ್ಧಾರಕ ಬಸವಣ್ಣ ॥ಅಪ॥

ಕಲ್ಯಾಣವಾಸನೆ ಬಸವಣ್ಣ
ಕಾರುಣ್ಯ ಮೂರುತಿ ಬಸವಣ್ಣ
ಕಾಯಕ ಯೋಗಿಯೇ ಬಸವಣ್ಣ
ಕೈವಲ್ಯದಾತನೆ' ಬಸವಣ್ಣ ॥೧॥

ನಿರ್ಗುಣ ರೂಪನೆ ಬಸವಣ್ಣ
ನಿಷ್ಕಲಲಿಂಗನೇ ಬಸವಣ್ಣ
ಅಕಾರ ಉಕಾರ ಮಕಾರ ಮೂಲದ
ಓಂಕಾರ ನೀನೆ ಬಸವಣ್ಣ ॥೨॥

ಪರಮ ಪ್ರಭುವೇ ನೀ ಬಸವಣ್ಣ
ಪತಿತ ಪಾವನನೆ ಬಸವಣ್ಣ
ಭಕ್ತರ ಪ್ರಾಣನೆ ಬಸವಣ್ಣ
ಭವ ಭಯ ತಾರಕ ಬಸವಣ್ಣ ॥೩॥

ಕಿಂಕರ ನೀನೆ ಬಸವಣ್ಣ
ಶಂಕರ ನೀನೆ ಬಸವಣ್ಣ
ಮಂಕು ಮಾನವರ ಮದವನು ಹರಿಸಿದ
ಮಹಾದೇವ ನೀನೆ ಬಸವಣ್ಣ ॥೪॥

ಅಣುವಿನೊಳಗೆ ನೀ ಅಣುವಣ್ಣ
ಮಹದೊಳಗೆ ನೀ ಮಹವಣ್ಣ
ಶರಣರ ಹೃದಯ ನಿವಾಸನೆ ಅಣ್ಣ
ಬೇಗನೆ ಬಾರೈ ಬಸವಣ್ಣ ॥೫॥

**ಮತ್ತಿಹಳ್ಳಿಯಲ್ಲಿ ಶರಣ ಮಂಟಪ ಸ್ಥಾಪಿಸಿದ್ದು :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ಬಸವತತ್ವ-ಶರಣರ ವಚನಗಳ ಅಧ್ಯಯನ ಮೂಲಕ ತಮ್ಮ ಊರಿನಲ್ಲಿ 'ಶರಣ ಮಂಟಪ' ಎಂಬ ಹೆಸರಿನಲ್ಲಿ ಕಾರ್ಯಕ್ರಮಗಳನ್ನು ಆರಂಭಿಸಿ, ಸುತ್ತ ಮುತ್ತಲ ಗ್ರಾಮಸ್ಥರ ಕರೆಯ ಮೇರೆಗೆ 'ಬಸವೇಶ್ವರ' ನಾಟಕ ಕಲಿಸಿ ಆಡಿಸುತ್ತಿದ್ದರು. ಪೂಜ್ಯ ಲಿಂಗಾನಂದ ಸ್ವಾಮಿಗಳವರ ಪ್ರವಚನ ರಾಜ್ಯದ ಯಾವುದೇ ಗ್ರಾಮ-ಪಟ್ಟಣಗಳಲ್ಲಿ ಆಯೋಜಿಸಲ್ಪಟ್ಟಾಗ ಅವರ ಕರೆಯ ಮೇರೆಗೆ ಹೋಗಿ ವಚನಸಂಗೀತ, ಬಸವಗುರು ಪ್ರಾರ್ಥನೆ-ಮಂಗಲ ಹಾಡುತ್ತಿದ್ದರು.

**ಧರ್ಮಪತ್ನಿ ಕಾಳಮ್ಮ ಲಿಂಗೈಕ್ಯರಾದದ್ದು :** ಶ್ರಾವಣ ಮಾಸದ ಮೊದಲ ಸೋಮವಾರ, ಬೆಳಗಿನ ಜಾವ ಸಿದ್ಧರಾಮಣ್ಣ ಶರಣರು ತೋಟಕ್ಕೆ ಹೋಗಿ ಸ್ನಾನ ಮಾಡಿ ಮನೆಗೆ ಬಂದರು. ಪತ್ನಿಯು ಬೆಳಕಾದರೂ ಇನ್ನೂ ಮಲಗಿಯೇ ಇದ್ದರು. ಶರಣರನ್ನು ನೋಡಿ ಕೈ ಮುಗಿದರು. ಇಂದು ಸೋಮವಾರ, ಕೈಲಾಸಕ್ಕೆ ಹೋಗುವದಾದರೆ ಹೋಗಬಹುದು ಎಂದು ಬಿಟ್ಟರು. ಕಾಳಮ್ಮ ಕೈಮುಗಿದು 'ಆಗಲಿ ಹೋಗುವೆ' ಎಂದರು. ಶರಣರು ಲಿಂಗಪೂಜೆ ಮಾಡಿಕೊಂಡು ಲಿಂಗ ಪಾದೋದಕ ತಂದು ಬಾಯಿಗೆ ಹಾಕಿದರು. ಕಾಳಮ್ಮ ಮೂವರೂ ಮಕ್ಕಳನ್ನು ಕಣ್ತುಂಬ ನೋಡಿ ಕಣ್ಣುಮುಚ್ಚಿ 'ಬಸವಾ ಶಿವನೇ' ಎನ್ನುತ್ತಾ ಲಿಂಗೈಕ್ಯರಾದರು. ಶರಣರ ಗುಣ ಮರಣದಲ್ಲಿ ನೋಡು ಎಂಬುದು ದಿಟವಾಯಿತು. ಅಂದಿನಿಂದ ವಿ. ಸಿದ್ಧರಾಮಣ್ಣನವರು ಪರಮವಿರಕ್ತಿ ಭಾವ ತಾಳಿ ಸಂಚರಿಸತೊಡಗಿದರು.

**ದಾವಣಗೆರೆಯಿಂದ ಧಾರವಾಡಕ್ಕೆ :** ಪೂಜ್ಯ ಲಿಂಗಾನಂದ ಸ್ವಾಮಿಗಳು ತಮ್ಮ ವಾಸ್ತವ್ಯ ವನ್ನು ದಾವಣಗೆರೆಯಿಂದ ಧಾರವಾಡಕ್ಕೆ ಬದಲಾಯಿಸಿದರು. ಪೂಜ್ಯ ಮಾತಾಜಿಯವರು ಕರ್ನಾಟಕ ವಿಶ್ವವಿದ್ಯಾಲಯದ ತತ್ವಶಾಸ್ತ್ರ ವಿಭಾಗದಲ್ಲಿ ಎಂ.ಎ. ತತ್ವಶಾಸ್ತ್ರ ಓದಲು ಬಂದು ನೆಲೆಸಿದರು. ವಿ. ಸಿದ್ಧರಾಮಣ್ಣ ಶರಣರು ೧೯೬೬ ರಿಂದ ಧಾರವಾಡ, ಬೆಳಗಾವಿ, ವಿಜಯಪುರ, ಕಲಬುರ್ಗಿ, ರಾಯಚೂರ, ಬೀದರ ಜಿಲ್ಲೆಗಳಲ್ಲಿ ಪೂಜ್ಯ ಗುರುಗಳೊಂದಿಗೆ ಪ್ರವಚನ-ವಚನಸಂಗೀತ ಸೇವೆಸಲ್ಲಿಸುತ್ತಾ ಚರಜಂಗಮವಾಗಿ ಸಂಚರಿಸಿದರು.

**ವಿಜಯಪುರದಲ್ಲಿ ಪ್ರವಚನ :** ೧೯೬೭ರಲ್ಲಿ ವಿಜಯಪುರದ ಶಿವಾನುಭವ ಮಂಟಪದಲ್ಲಿ ಒಂದೂವರೆ ತಿಂಗಳು ಬಸವತತ್ವ ಪ್ರವಚನ ನೀಡಲು ಪೂಜ್ಯ ಲಿಂಗಾನಂದ ಸ್ವಾಮಿಗಳು ಆಗಮಿಸಿದಾಗ, ಅವರೊಂದಿಗೆ ವಿ. ಸಿದ್ಧರಾಮಣ್ಣ ಶರಣರು, ಶಿವಾನಂದ ಗುರೂಜಿ, ಶೇಖರಣ್ಣ ಆಗಮಿಸಿ, ಜ್ಞಾನಯೋಗಾಶ್ರಮದ (ಕರಡಿ ಅವರ ತೋಟದಲ್ಲಿ) ವಾಸ್ತವ್ಯ ಮಾಡಿದರು. ಆ ಸಂದರ್ಭದಲ್ಲಿ ನಾನು ಬಿ.ಎಲ್.ಡಿ.ಇ. ಸಂಸ್ಥೆಯ ಕೆ.ಸಿ.ಪಿ. ಸೈನ್ಸ್ ಕಾಲೇಜಿನಲ್ಲಿ ವಿಜ್ಞಾನ ವಿದ್ಯಾರ್ಥಿಯಾಗಿ ಓದುತ್ತಿದ್ದೆ. ಪೂಜ್ಯ ವೇದಾಂತಕೇಸರಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಹಾಗೂ ಜ್ಞಾನಯೋಗಿ ಶ್ರೀ ಸಿದ್ಧೇಶ್ವರ ಸ್ವಾಮಿಗಳ ಸಾನಿಧ್ಯದಲ್ಲಿ ಆಶ್ರಮದಲ್ಲಿ ಸಾಧಕ ವಿದ್ಯಾರ್ಥಿಯಾಗಿದ್ದೆ. ಹತ್ತಾರು ಜನ ಸಾಧಕ

ಗುರುಗಳೂ ಇದ್ದರು. ಶ್ರೀ ಲಿಂಗಾನಂದ ಸ್ವಾಮಿಗಳೂ ತಮ್ಮ ವಿದ್ಯಾರ್ಥಿ ಜೀವನ ಹಾಗೂ ಅಧ್ಯಾಪಕರಾಗಿದ್ದ ಕಾಲದಲ್ಲಿ ಪೂಜ್ಯ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳವರ ಶಿಷ್ಯರಾಗಿದ್ದವರಾಗಿದ್ದುದರಿಂದ ಜ್ಞಾನಯೋಗಾಶ್ರಮದ ಸಾಧಕ ಗುರುಗಳೆಲ್ಲ ಅವರ ಗುರುಬಂಧುಗಳೇ ಆಗಿದ್ದರು.

ಪ್ರತಿದಿನ ಬೆಳಿಗ್ಗೆ ಶ್ರೀ ಸಿದ್ಧೇಶ್ವರ ಸ್ವಾಮಿಗಳವರಿಂದ ಅಲ್ಲಮಪ್ರಭುದೇವರ ಬೆಡಗಿನ ವಚನಗಳ ಚಿಂತನ, ಸಂಜೆ ಶ್ರೀ ಲಿಂಗಾನಂದ ಸ್ವಾಮಿಗಳವರಿಂದ ಬಸವಣ್ಣನವರ ವಚನಗಳ ಪ್ರವಚನ, ಮಧ್ಯಾಹ್ನ ಭಾರತೀಯ ದಾರ್ಶನಿಕರ-ಪಾಶ್ಚಿಮಾತ್ಯ ತತ್ವಚಿಂತಕರ ಕುರಿತು ಚರ್ಚೆ, ವಿ. ಸಿದ್ಧರಾಮಣ್ಣ ಶರಣರಿಂದ ವಚನಸಂಗೀತ- ಈ ೪೫ ದಿನಗಳು ನಮಗೆಲ್ಲ ತತ್ವಜ್ಞಾನ-ವಚನಾಮೃತದ ಮಹಾಪ್ರಸಾದ ಲಭಿಸಿತು. ಅನಂತರ ಪೂಜ್ಯ ಗುರುಗಳು ಹಾಗೂ ಶರಣರು ಕಲ್ಯಾಣನಾಡಿಗೆ ಪ್ರವಚನಕ್ಕೆ ತೆರಳಿದರು.

**ಬಸವಭೂಮಿಯಿಂದ ಕಲ್ಯಾಣನಾಡಿಗೆ** : ವಿ. ಸಿದ್ಧರಾಮಣ್ಣ ಶರಣರು ಅದಾಗಲೇ ಮತ್ತಿಹಳ್ಳಿಯ ಮನೆತನದ ಜವಾಬ್ದಾರಿಯನ್ನು, ಮಕ್ಕಳ ಜವಾಬ್ದಾರಿಯನ್ನು ಬಂಧುಗಳಿಗೆ ಒಪ್ಪಿಸಿ, ಪರಮ ವಿರಕ್ತರಾಗಿ ಬಸವತತ್ವ ಪ್ರಸಾರಕ್ಕೆ ಅರ್ಪಿಸಿಕೊಂಡು ಬಿಟ್ಟಿದ್ದರು. ರಕ್ತ ಸಂಬಂಧದ ವ್ಯಾಮೋಹ ತೊರೆದು ಭಕ್ತಿ ಸಂಬಂಧದ ಬಸವಭಕ್ತರು ತನ್ನವರೆಂದು ಭಾವಿಸಿದ್ದರು. 'ಬಸವಣ್ಣನವರೇ ತಂದೆ, ನೀಲಮ್ಮನವರೇ ತಾಯಿ' ಎಂದು ಬಸವತತ್ವ ನಿಷ್ಠೆ ಅಂಗವಿಸಿಕೊಂಡು ಸರ್ವಜನಾಂಗದವರನ್ನು ಇವನಮ್ಮವ ಇವನಮ್ಮವ ಇವ ನಮ್ಮವನೆಂದು ಗೌರವಿಸುತ್ತಾ, ವಿಶ್ವಬಸವಧರ್ಮಿಯರಾಗಿದ್ದರು. ಅಂತೆಯೇ ವಿ. ಸಿದ್ಧರಾಮಣ್ಣ ಎಂದರೆ ವಿಶ್ವಬಸವಧರ್ಮಿ ಸಿದ್ಧರಾಮಣ್ಣರಾದರು.

ಕಲ್ಯಾಣ ನಾಡಿನ ಕನ್ನಡದ ಗುರು ಭಾಲ್ಕಿಯ ಹಿರೇಮಠದ ಶ್ರೀ **ಮ.ಘ.ಚ. ಚೆನ್ನಬಸವ ಪಟ್ಟದ್ದೇವರು** ಅಂದಿನ ಹೈದ್ರಾಬಾದ ಕರ್ನಾಟಕದಲ್ಲಿ (ನಿಜಾಮ ಆಡಳಿತದ ಕಾಲದಲ್ಲಿ) ಕನ್ನಡ ಶಾಲೆಗಳನ್ನು ತೆರೆದು, ಕನ್ನಡ ಕಲಿಸಿ, ಕನ್ನಡ ಉಳಿಸಿದವರು. ಈ ಪೂಜ್ಯರ ದರ್ಶನ, ಅವರ ಸಾನಿಧ್ಯ ಹಾಗೂ ಸಹಕಾರದಿಂದ ಪೂಜ್ಯ ಲಿಂಗಾನಂದ ಸ್ವಾಮಿಗಳು ಪ್ರವಚನ, ವಿ. ಸಿದ್ಧರಾಮಣ್ಣ ಶರಣರು ವಚನ ಗಾಯನ ಹಾಗೂ ಬಸವೇಶ್ವರ ನಾಟಕ ಆಡಿಸುತ್ತಾ ಬಸವಪ್ರಜ್ಞೆ ಜಾಗೃತಗೊಳಿಸಿದರು. ಅಖಂಡ ಎರಡು ವರುಷ ಬೀದರ ಜಿಲ್ಲೆಯ ಎಲ್ಲ ತಾಲೂಕು, ಹಳ್ಳಿಗಳಿಗೆಲ್ಲ ಬಸವತತ್ತ್ವ ಪ್ರಸಾರಗೈದರು. ಲೋಕ ನಾಯಕ ಭೀಮಣ್ಣ ಖಂಡ್ರೆಯವರು ಹಾಗೂ ಕಲ್ಯಾಣನಾಡಿನ ಹಿರಿಯ ಶರಣರು ಸಹಕಾರ ನೀಡಿದರು.

೧೯೬೭-೬೮ರಲ್ಲಿ ಬಸವೇಶ್ವರರ ಅಷ್ಟಶತಮಾನೋತ್ಸವ ಅದ್ದೂರಿಯಾಗಿ ಸರಕಾರದಿಂದ ಆಚರಿಸಲ್ಪಟ್ಟಿತು. ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶಗಳಿಂದ ಲಕ್ಷಾಂತರ ಜನ ಆಗಮಿಸಿದ್ದರು. ವಿ. ಸಿದ್ಧರಾಮಣ್ಣ ಶರಣರು ತಮ್ಮ ಕಂಚಿನ ಕಂಠದಿಂದ ಪೂಜ್ಯ ಶರಣಯ್ಯಸ್ವಾಮಿ ಮಹಾಗಾಂವ ಅವರು ಬರೆದ- 'ಬಸವಭೂಮಿಯು ಮರಳಿ

ಬಸವಾದಿ ಪ್ರಮಥರಿಂ ವೈಭವದಿ ಮೆರೆಯಬೇಕು' ಎಂಬ ಬಸವ ಕ್ರಾಂತಿ ಗೀತೆಯನ್ನು ಹಾಡಿ ಬಸವಭಕ್ತರಿಗೆಲ್ಲ ರೋಮಾಂಚನಗೊಳಿಸಿದರು. 'ಸ್ವಾಮಿ ಬಸವೇಶ ದುನಿಯಾ ಮೆ ಕ್ಯಾ ಕರಗಯೆ, ಸಮಾತನಕಾ ಡಂಕಾ ಬಜಾಕರ ಗಯೆ' ಎಂಬ ಹಿಂದಿ ಪದಗಳು ಕಲ್ಯಾಣ ನಾಡಿನಾದ್ಯಂತ ಮನೆ ಮಾತಾದವು. ಔರಾದ ಸ್ಕೂಲಿನಲ್ಲಿ ಹೈಸ್ಕೂಲು ಓದುತ್ತಿದ್ದ ಶ್ರೀ ಶಿವರಾಜ ಕಾಡೋದೆ ಎಂಬ ತರುಣ ವಿದ್ಯಾರ್ಥಿ ಈ ಪೂಜ್ಯರಿಬ್ಬರ ಪ್ರವಚನ-ವಚನ ಸಂಗೀತ ಕೇಳಿ ಪ್ರಭಾವಿತನಾಗಿ, ಭಾಲ್ಕಿ ಹಿರೇಮಠಕ್ಕೆ ಬಂದು ಪ್ರಸಾದನಿಯಲದ ವಿದ್ಯಾರ್ಥಿಯಾಗಿ ಬಿ.ಎ. ಹಾಗೂ ಎಂ.ಎ. ಕನ್ನಡ ಓದಿ, ಹಿರಿಯ ಗುರುಗಳಾದ ಪೂಜ್ಯ ಚೆನ್ನಬಸವ ಪಟ್ಟದ್ದೇವರ ಕೃಪಾದೃಷ್ಟಿಗೆ ಪಾತ್ರನಾಗಿ, ಶಿವಲಿಂಗದೇಶಿಕರಾಗಿ, ಭಾಲ್ಕಿ ಹಿರೇಮಠದ ಶ್ರೀ ಮ.ಘ.ಚ. ಬಸವಲಿಂಗ ಪಟ್ಟದ್ದೇವರಾಗಿ ಬಸವತತ್ತ್ವ ಪ್ರಸಾರದ ಮಣಿಹ ಮುಂದುವರೆಸಿಕೊಂಡು ಮುನ್ನಡೆದಿರುವುದು ಇಂದು ಎಲ್ಲರಿಗೂ ತಿಳಿದ ವಿಷಯವಾಗಿದೆ.

**ಧಾರವಾಡದಲ್ಲಿ ಅಕ್ಕಮಹಾದೇವಿ ಅನುಭಾವಪೀಠ :** ಬಸವಕಲ್ಯಾಣದಲ್ಲಿ ಜರುಗಿದ ಬಸವೇಶ್ವರ ಅಷ್ಟ ಶತಮಾನೋತ್ಸವದಲ್ಲಿ- ಮಹಿಳಾ ಗೋಷ್ಠಿಯಲ್ಲಿ- ಅದೇ ಎಂ.ಎ. ತತ್ವಜ್ಞಾನ ಓದುತ್ತಿದ್ದ ಮಾತೆ ಮಹಾದೇವಿಯವರು 'ಮಹಿಳಾ ಸಮಾನತೆ ಸಾರುವ ಅಕ್ಕಮಹಾದೇವಿ ಜಗದ್ಗುರು ಪೀಠ ಸ್ಥಾಪಿಸುವ ವಿಷಯ ಘೋಷಿಸಿದ್ದು, ೧೯೭೦ನೇ ಇಸ್ವಿ ಧಾರವಾಡದ ಉಳವಿ ರಸ್ತೆಯಲ್ಲಿರುವ ಗುಡ್ಡದ ಮೇಲೆ ಅಕ್ಕಮಹಾದೇವಿ ಅನುಭಾವ ಪೀಠ, ಆಶ್ರಮ ಸ್ಥಾಪಿಸಿ ಪ್ರಥಮ ಮಹಿಳಾ ಜಗದ್ಗುರು ಮಾತೆ ಮಹಾದೇವಿ ಎಂಬ ಅಭಿದಾನ ಹೊಂದಿದರು. ಪೂಜ್ಯ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಪಟ್ಟಾಧಿಕಾರ ನೆರವೇರಿಸಿದರು. ಪೂಜ್ಯಶ್ರೀ ಲಿಂಗಾನದ ಸ್ವಾಮಿಗಳವರ ಗುರುಗಳಾಗಿದ್ದ ಪೂಜ್ಯಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳವರು ಗುರುವಿನ ಗುರು ಪರಮಗುರುವಾಗಿ ಪಟ್ಟಾಭಿಷೇಕ ನೆರವೇರಿಸಿ, ಅಕ್ಕಮಹಾದೇವಿ ಪೀಠದ ಮೇಲೆ 'ಮಾತೆ ಮಹಾದೇವಿ'ಯವರನ್ನು ಕೂಡಿಸಿ, ಶಿರದ ಮೇಲೆ ಲಿಂಗಹಸ್ತವಿರಿಸಿ ಆಶೀರ್ವದಿಸಿದ್ದು ಲಿಂಗಾಯತ ಧರ್ಮದ ಇತಿಹಾಸದಲ್ಲಿ ಒಂದು ಅಪೂರ್ವ ಘಟನೆಯಾಗಿದೆ. ಈ ಸಂದರ್ಭದಲ್ಲಿ ಪೂಜ್ಯ ವಿ. ಸಿದ್ಧರಾಮಣ್ಣ ಶರಣರು- 'ಜಯ ಜಯ ಜಯ ಜಗನ್ಮಾತೆಗೆ ಜಯದಾರುತಿ ಬೆಳಗಿರಿ ಮಹಾದೇವಿಗೆ' ಎಂದು ಸ್ವರಚಿತ ಮಂಗಳಾರತಿ ಪದ ಬರೆದು ಹಾಡಿದ್ದು ಇಂದಿಗೂ ಬಸವಭಕ್ತರ ಕಿವಿಗಳಲ್ಲಿ ಮಾರ್ದನಿಸುತ್ತಿದೆ. ಪೂಜ್ಯ ಶಿವಾನಂದ ಗುರೂಜಿಯವರು ಹಗಲಿರುಳು ಈ ಪಟ್ಟಾಧಿಕಾರ ಮಹೋತ್ಸವದಲ್ಲಿ ಸಲ್ಲಿಸಿದ ಸೇವೆ ಅವಿಸ್ಮರಣೀಯವಾದುದು.

**ಮತ್ತಿಹಳ್ಳಿಯಿಂದ-ಬಸವಕಲ್ಯಾಣಕ್ಕೆ :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ಸದ್ಗುರು ಶ್ರೀ ಲಿಂಗಾನಂದ ಸ್ವಾಮಿಗಳ ಪ್ರವಚನವಿಲ್ಲದ ಬಿಡುವಿನ ದಿನಗಳಲ್ಲಿ ಸ್ವಗ್ರಾಮ ಮತ್ತಿಹಳ್ಳಿಗೆ ಬಂದು ನೆಲೆಸುತ್ತಿದ್ದರು. ಒಮ್ಮೆ ಊರಲ್ಲಿಯ ಬಹುತೇಕ ಸಂಪ್ರದಾಯವಾದಿ ಜನರು 'ಊರ ಮಾರಮ್ಮನ ಜಾತ್ರೆ' ಮಾಡಲು ನಿರ್ಧರಿಸಿದರು. ಜಾತ್ರೆಯ ಹಿಂದಿನ ದಿನ ಮಾರಮ್ಮಳಿಗೆ ಕೋಣದ ಬಲಿ ಕೊಡಲು ನಿರ್ಧರಿಸಿದ ಸುದ್ಧಿಯು ಶರಣರಿಗೆ ತಿಳಿಯಿತು.

ಕೂಡಲೇ ಶರಣರು ಮಾರಮ್ಮನ ಗುಡಿಯ ಕೇರಿಯ ಹಿರಿಯರಲ್ಲಿ ಹೋಗಿ ಕೈಮುಗಿದು, ಜಾತ್ರೆಯ ಕಾಲಕ್ಕೆ ಕುರಿ, ಕೋಳಿ, ಕೋಣ ಕಡಿದು ಪ್ರಾಣಿಹಿಂಸೆ ಮಾಡಬೇಡಿರಿ ಎಂದು ಕೇಳಿಕೊಂಡರು. ಸಕಲಪ್ರಾಣಿಗಳಲ್ಲಿ ದಯವಿರಬೇಕು, ದಯವೇ ಧರ್ಮದ ಮೂಲ ಎಂಬ ಬಸವಣ್ಣನವರ ವಚನ ಹೇಳಿ, ತಿಳಿಯಹೇಳಿದರು. ಆದರೆ ಮೂಢಭಕ್ತಿಯ ಜನರು ಒಪ್ಪದೇ ಹೋದಾಗ– ಅದೇ ಮಾರಿದೇವತೆಯ ಗುಡಿಯಲ್ಲಿ ಆಮರಣ ಉಪವಾಸ ಕುಳಿತರು. ಮಾರಮ್ಮಳ ಜಾತ್ರೆ ಮಾಡಿರಿ, ಆದರೆ ಪ್ರಾಣಿ ಬಲಿಕೊಡಬೇಡಿರಿ ಎಂದು ತಿಳಿಸಿದಾಗ, ಕೊನೆಗೆ ಊರ ಪ್ರಮುಖರು "ಶರಣರೆ ಕೋಣ–ಕುರಿ ಕಡಿಯುವದಿಲ್ಲ, ಹೋಳಿಗೆ–ಹುಗ್ಗಿ ಮಾಡಿ ಜಾತ್ರೆ ಮಾಡುತ್ತೇವೆ" ಎಂದು ಪ್ರಮಾಣ ಮಾಡಿದರು. ಅದೇ ಸಮಯಕ್ಕೆ ಚಿಗಟೇರಿಯ ಕೊಟ್ರಯ್ಯಸ್ವಾಮಿ ಗವಾಯಿಗಳು ಅಲ್ಲಿಗೆ ಬಂಧು "ಶರಣರೆ, ನೀವು ಉಪವಾಸ ಮಾಡಿ ಪ್ರಾಣ ಕೊಡಬೇಕಾಗಿಲ್ಲ, ನಿಮ್ಮಿಂದ ಬಸವೇಶ್ವರರ ಕಾರ್ಯ ಬಹಳ ನಡೆಯಬೇಕಾಗಿದೆ. ನಾಲತ್ವಾಡದ ವೀರೇಶ್ವರ ಶರಣರೂ ಇದೇ ರೀತಿ ಮಾರಮ್ಮಳ ಜಾತ್ರೆ ಪ್ರಾಣಿ ಬಲಿ ಮಾಡಬೇಡಿರೆಂದು ಹೇಳಿದಾಗ, ಜನ ಕೇಳದೇ ಹೋದಾಗ– ತಮ್ಮ ಊರು ನಾಲತ್ವಾಡ ಬಿಟ್ಟು ಸೊಲ್ಲಾಪುರಕ್ಕೆ ಹೋಗಬೇಕಾಯಿತು. ಅಜ್ಞ ಜನರು ನಿನ್ನನ್ನು ಅರಿಯಲಾರರು' ಎಂದು ಹೇಳಿ ಶರಣರನ್ನು ಉಪವಾಸ ಬಿಡಿಸಿ ಅಲ್ಲಿಂದ ಕರೆದೊಯ್ದರು.

ಅಂದು ರಾತ್ರಿ ಶರಣರು ಪೂಜೆ ಪ್ರಸಾದ ಮಾಡಿ ತಮ್ಮ ಮನೆಯಲ್ಲಿ ಮಲಗಿದರು. ಶರಣರಿಗೆ ಮಾತುಕೊಟ್ಟರೂ ಸಹ ಕೆಲವು ಮೂಢ ಜನರು ಮಧ್ಯರಾತ್ರಿಯಲ್ಲಿ ಕೋಣ–ಕುರಿ ಕಡಿದು ರಕ್ತ ಅಭಿಷೇಕ ಮಾಡಿದರು. ಶರಣರು ಬೆಳಿಗ್ಗೆ ಎದ್ದಾಗ ಬಸವ ಭಜನಾ ಮಂಡಳಿಯವರು ಬಂದು ವಿಷಯ ತಿಳಿಸಿದಾಗ, ವಿ. ಸಿದ್ಧರಾಮಣ್ಣ ಶರಣರು ಮನನೊಂದು–ಮರುಗಿದರು. ಅದೇ ದಿನ ಬಸವಕಲ್ಯಾಣದಿಂದ ಪೂಜ್ಯ ಶ್ರೀಮ.ಘ.ಚ. ಚೆನ್ನಬಸವ ಪಟ್ಟದ್ದೇವರಿಂದ 'ಟೆಲಿಗ್ರಾಂ' ಕರೆ ಬಂದಿತು– 'ಶರಣರೆ, ತಾವು ಕೂಡಲೇ ಬಸವಕಲ್ಯಾಣಕ್ಕೆ ಹೊರಟು ಬನ್ನಿರಿ." ಇದನ್ನು ನೋಡಿದ ಶರಣರು– ನೋಡಿರಿ, ಬಸವಗುರುವಿನ ಕರೆ ಬಂದಿತು. ನಾನು ಕಲ್ಯಾಣಕ್ಕೆ ಹೊರಡುವೆ ಎಂದು ಭಕ್ತರಿಗೆ ಹೇಳಿ– ಮತ್ತಿಹಳ್ಳಿಯಿಂದ ಬಸವಕಲ್ಯಾಣ ಅನುಭವ ಮಂಟಪದ ನಿರ್ಮಾಣ ಸ್ಥಳ (ಮರಿದೇವರ ಗುಡ್ಡ)ಕ್ಕೆ ಹೊರಟರು.

**ಬಸವಕಲ್ಯಾಣದಲ್ಲಿ ನೂತನ ಅನುಭವ ಮಂಟಪ ನಿರ್ಮಾಣ ಕಾರ್ಯದಲ್ಲಿ :** ಪೂಜ್ಯ ಶ್ರೀ ಮ.ಘ.ಚ. ಚೆನ್ನಬಸವ ಪಟ್ಟದ್ದೇವರು ಭಾಲ್ಕಿ ಹಿರೇಮಠದಿಂದ ಬಸವಕಲ್ಯಾಣಕ್ಕೆ ಬಂದು ತ್ರಿಪುರಾಂತಕ ಕೆರೆಯ ದಡದಲ್ಲಿರುವ ಮರಿದೇವರ ಗುಡ್ಡದ ಮೇಲೆ ಒಂದೆರಡು ಕೋಣೆಗಳನ್ನು ಕಟ್ಟಿಸಿಕೊಂಡು ನೆಲೆಸಿದ್ದರು. ವಿ. ಸಿದ್ಧರಾಮಣ್ಣ ಶರಣರು ಬಂದು ಪೂಜ್ಯರೊಂದಿಗೆ ಉಳಿದರು. ನೂತನ ಅನುಭವ ಮಂಟಪ ನಿರ್ಮಾಣ ಕಾರ್ಯದಲ್ಲಿ ೧೯೭೨ ರಿಂದ ೧೯೮೮ರ ವರೆಗೆ ಪೂಜ್ಯರೊಂದಿಗೆ ತೊಡಗಿಸಿಕೊಂಡರು. ಪ್ರತಿ ರವಿವಾರ ಮುಂಜಾನೆ ಅಲ್ಲಮಪ್ರಭುದೇವರ ಗದ್ದುಗೆ ಮಠಕ್ಕೆ ಹೋಗಿ ಬಸವಗುರು

ಪ್ರಾರ್ಥನೆ, ವಚನಸಂಗೀತ, ವಚನ ಅನುಭಾವ ನಡೆಸಿ ಬರುತ್ತಿದ್ದರು. ಬೀದರದ ಶರಣರಾದ ಶ್ರೀ ಗುರುಪಾದಪ್ಪ ಗಂದಿಗುಡೆ, ಶ್ರೀ ಮಹಾದೇವಪ್ಪ ಮೀಸೆ, ಶ್ರೀ ವಿಶ್ವನಾಥ ಬಿರಾದಾರ ಇಂಜಿನೀಯರ್, ಶ್ರೀ ಶಂಕರಣ್ಣ ಕೋಳಕೂರ, ಶ್ರೀ ಬಸವರಾಜ ಕಾಮಶೆಟ್ಟಿ, ಶ್ರೀ ಅಪ್ಪಾರಾವ ಜಾನತೆ, ಶ್ರೀ ವೈಜನಾಥಪ್ಪ ದುರ್ಗೆ, ಶ್ರೀ ಅವಸೆ, ಬಕ್ಕಪ್ಪ ಗೋಪ, ಶ್ರೀ ಗುರುನಾಥ ಗಡ್ಡೆ, ಶ್ರೀ ಬಕ್ಕಯ್ಯಸ್ವಾಮಿ, ಶ್ರೀ ಮಹಾದೇವ ಇಜಾರೆ, ಶ್ರೀ ಅಶೋಕ, ಶ್ರೀ ಘುಲಾರೆ ಮುಂತಾದವರ ಸಹಕಾರ ಸ್ಮರಣೀಯವಾಗಿತ್ತು. ಲೋಕನಾಯಕ ಶ್ರೀ ಭೀಮಣ್ಣ ಖಂಡ್ರೆ ಅವರಂತೂ ಪೂಜ್ಯಶ್ರೀ ಚೆನ್ನಬಸವ ಪಟ್ಟದ್ದೇವರ ಬಲಗೈಯಾಗಿ ತನು-ಮನ-ಧನದಿಂದ ಸೇವೆ ಸಲ್ಲಿಸಿದುದರ ಪರಿಣಾಮ ಹಾಗು ಭಾಲ್ಕಿ ಹಿರೇಮಠದ ಭಕ್ತರ ಗುರುಕಾಣಿಕೆಯ ಹಣವೂ ಅರ್ಪಿತವಾಗಿ ೧೯೮೦ರಲ್ಲಿ 'ನೂತನ ಅನುಭವ ಮಂಟಪ'ವು ನಿರ್ಮಾಣವಾಯಿತು.

ಪೂಜ್ಯ ಶ್ರೀ ವಿ. ಸಿದ್ಧರಾಮಣ್ಣ ಶರಣರು ಅಪ್ಪಟ ಬಸವತತ್ತ್ವನಿಷ್ಠ ಶರಣರಾಗಿ, ಪೂಜ್ಯ ಶ್ರೀಮಘಚ ಚೆನ್ನಬಸವಪಟ್ಟದ್ದೇವರ ಮಾನಸಪುತ್ರರಾಗಿ ಕಾರ್ಯನಿರ್ವಹಿಸಿದರು. ಶರಣರು ಪ್ರಭುಲಿಂಗ ಲೀಲೆ ಪ್ರವಚನ, ಬಸವಾದಿ ಶರಣರ ವಚನಸಂಗೀತ, ಬಸವಣ್ಣನವರು, ಅಕ್ಕಮಹಾದೇವಿ, ಹರಳಯ್ಯ, ಚೆನ್ನಯ್ಯ, ನನ್ನಯ್ಯ ಮುಂತಾದ ನಾಟಕಗಳಿಂದ ಇಡೀ ಬೀದರ ಜಿಲ್ಲೆಯಾದ್ಯಂತ ಬಸವಪ್ರಜ್ಞೆ ಜಾಗೃತವಾಗುವಂತಾಯಿತು.

**ನೂತನ ಅನುಭವ ಮಂಟಪ ಉದ್ಘಾಟನೆ :** ೧೯೮೧ನೇ ಇಸ್ವಿ (೨೮-೧೧-೧೯೮೧) ನವೆಂಬರ ದೀಪಾವಳಿ ಪಾಡ್ಯದ ಸಂದರ್ಭ, ಷಟ್‌ಸ್ಥಲ ಚಕ್ರವರ್ತಿ ಚೆನ್ನಬಸವಣ್ಣನವರ ಜಯಂತ್ಯುತ್ಸವ, ಅನುಭವ ಮಂಟಪ ಐತಿಹಾಸಿಕತೆ ಬರೆದಿದ್ದ ಲಿಂ. ಶರಣ ಉತ್ತಂಗಿ ಚೆನ್ನಪ್ಪನವರ ಜನ್ಮ ದಿನೋತ್ಸವ, ವಚನ ಸಂಶೋಧನ ಪಿತಾಮಹ ಶರಣ ಫ.ಗು. ಹಳಕಟ್ಟಿ ಅವರ ಜನ್ಮ ಶತಮಾನೋತ್ಸವ, ನೆನಹು ಎಲ್ಲವೂ ಸೇರಿ "ನೂತನ ಅನುಭವ ಮಂಟಪ" ಉದ್ಘಾಟನೆ ಹಾಗೂ ಒಂದುವಾರ "೧ನೆಯ ಶರಣ ಕಮ್ಮಟ" ಶಿಬಿರ ಆಯೋಜಿತವಾಗಿತ್ತು.

ಪೂಜ್ಯ ಶ್ರೀಮಘಚ ಚೆನ್ನಬಸವ ಪಟ್ಟದ್ದೇವರ ದಿವ್ಯ ಸನ್ನಿಧಾನ, ಪೂಜ್ಯ ವಿ. ಸಿದ್ಧರಾಮಣ್ಣ ಶರಣರಿಂದ ಷಟ್‌ಸ್ಥಲ ಧ್ವಜಾರೋಹಣ ಹಾಗೂ 'ಏರುತಿದೆ ಹಾರುತಿದೆ ಷಟ್‌ಸ್ಥಲ ಧ್ವಜವು ಮೆರೆಯುತಿದೆ, ವಿಶ್ವ ಜೀವರನು ತನ್ನಯ ಗರ್ಭದಿ ಹೊತ್ತ ಬಸವಧ್ವಜ ಹಾರುತಿದೆ' ಎಂಬ ಧ್ವಜಗೀತೆ ರೋಮಾಂಚನಗೊಳಿಸಿತು. 'ಸಿದ್ಧರಾಮನ ಕರುಣೆಯ ಕೂಸಾ'ಗಿದ್ದ ಪೂಜ್ಯ ಶರಣೆ ಜಯದೇವಿತಾಯಿ ಲಿಗಾಡೆ ಅವರು ೧೯೮೦ ರಲ್ಲಿಯೇ ಸೊಲ್ಲಾಪುರದಿಂದ ಬಸವಕಲ್ಯಾಣಕ್ಕೆ ಆಗಮಿಸಿ ಭಕ್ತಿಭವನದಲ್ಲಿ ನೆಲೆಸಿದ್ದರು. ಪೂಜ್ಯ ಜಯದೇವಿತಾಯಿ ಅವರು ಬಸವಜ್ಯೋತಿ ಬೆಳಗುವ ಮೂಲಕ ನೂತನ ಅನುಭವ ಮಂಟಪ ಉದ್ಘಾಟಿಸಿದರು.

ಮುಖ್ಯ ಅತಿಥಿಗಳಾಗಿ ಲೋಕನಾಯಕ ಭೀಮಣ್ಣ ಖಂಡ್ರೆ, ಶ್ರೀ ವಿಶ್ವನಾಥ ರೆಡ್ಡಿ ಮುದ್ನಾಳ, ಶ್ರೀ ಬಸವರಾಜ ಪಾಟೀಲ ಅಟ್ಟೂರೆ, ಶ್ರೀ ಮಹಾದೇವಪ್ಪ ಮೀಸೆ, ಪ್ರೊ. ವಿ. ವಿ. ಸಂಗಮದ, ಪ್ರೊ. ಸಿದ್ಧಣ್ಣ ಲಂಗೋಟಿ, ಪ್ರೊ. ಕಲ್ಯಾಣಮ್ಮ ಲಂಗೋಟಿ, ಶ್ರೀ ಬಿ. ಮಹಾದೇವಪ್ಪ, ಶ್ರೀ ಲಿಂಗಣ್ಣ ಸತ್ಯಂಪೇಟೆ, ಶ್ರೀ ಸಿದ್ಧರಾಮಶರಣರು ಬೆಲ್ದಾಳ, ಶ್ರೀಮತಿ ಲಲ್ಲೇಶ್ವರಿ ಮೂಗಿ, ಶ್ರೀ ಬಸವರಾಜ ತಂಬಾಕೆ, ಶ್ರೀ ಶಿವಲಿಂಗದೇವರು (ಶ್ರೀ ಮಘಚ ಬಸವಲಿಂಗ ಪಟ್ಟದ್ದೇವರು), ಕರ್ನಾಟಕದ ಹಾಗೂ ಉದಗೀರ, ಲಾತೂರ, ನಿಲಂಗಾ, ಜಹಿರಾಬಾದ, ಹೈದರಾಬಾದ ಮುಂತಾದ ಭಾಗಗಳ ಶರಣರು, ಪೂಜ್ಯರು, ಬಸವಭಕ್ತರು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಆಗಮಿಸಿದ್ದರು. ೧೨ನೇ ಶತಮಾನದ ಬಸವಾದಿ ಶರಣರ ಅನುಭವ ಮಂಟಪದ ನೆನಹು, ಸಮಸ್ತ ಬಸವಭಕ್ತರಿಗೆ, ಲಿಂಗಾಯತರಿಗೆ ಶ್ರದ್ಧೆಯ ಧರ್ಮಕೇಂದ್ರವಾಯಿತು.

ಈ ಅನುಭವ ಮಂಟಪದಲ್ಲಿ ಬಸವಾದಿ ಶರಣರು ವಿವಿಧ ಕಾಯಕಗಳ ರೂಪದಲ್ಲಿ ಕಂಗೊಳಿಸುವಂತೆ ಕಲಾವಿದ ಬಸವರಾಜ ಮುಗಳಿ ಅವರಿಗೆ ಮಾರ್ಗದಶನ ಮಾಡಿ ವರ್ಣಚಿತ್ರಗಳನ್ನು ಬರೆಯಲು ಪ್ರೇರಣೆ ನೀಡಿದವರು ವಿ. ಸಿದ್ಧರಾಮಣ್ಣ ಶರಣರು. ಅಂದಿನಿಂದ (೧೯೮೧-೨೦೨೪) ಇಂದಿನವರೆಗೆ ಅನುಭವ ಮಂಟಪದ ಆಜೀವ ಸಂಚಾಲಕರಾಗಿ ಸೇವೆ ಸಲ್ಲಿಸಿದವರು ವಿ. ಸಿದ್ಧರಾಮಣ್ಣ ಶರಣರು. ಪ್ರತಿ ವರುಷ ದೀಪಾವಳಿ ಪಾಡ್ಯದಿಂದ ಒಂದುವಾರ 'ಶರಣ ಕಮ್ಮಟ' ಜರಗುತ್ತ ಬಂದಿದೆ. ಈಗ ಪೂಜ್ಯ ಡಾ. ಬಸವಲಿಂಗ ಪಟ್ಟದ್ದೇವರು ಬೃಹತ್ ಪ್ರಮಾಣದಲ್ಲಿ ಅನುಭವ ಮಂಟಪ ಉತ್ಸವ-ಶರಣಕಮ್ಮಟ ಮುಂದುವರೆಸಿಕೊಂಡು ನಡೆದಿದ್ದಾರೆ. ಈ ಶರಣ ಕಮ್ಮಟದಲ್ಲಿ ತಪ್ಪದೇ ಭಾಗವಹಿಸಿ ಅನುಭಾವ ನೀಡುವ ಭಾಗ್ಯ ನನಗೆ ಲಭಿಸಿರುವುದು ಪೂಜ್ಯರ ಕರುಣೆಯಾಗಿದೆ.

**ಬಸವದಳ ಪ್ರಾರಂಭಿಸಿದ್ದು :** ಬಸವಕಲ್ಯಾಣದಲ್ಲಿ ಅನುಭವ ಮಂಟಪದ ಉದ್ಘಾಟನೆಯ ಕಾಲಕ್ಕೆ ಯುವಕ-ಯುವತಿಯರಲ್ಲಿ ಬಸವಭಕ್ತಿಯೊಂದಿಗೆ-ಸಂಘಟನೆ ಮಾಡುವ ಸಲುವಾಗಿ 'ಬಸವದಳ' ಆರಂಭಿಸಿದರು. ೧೯೨೨-೨೩ ರಲ್ಲಿ ದಾವಣಗೆರೆಯಲ್ಲಿ ಶರಣ ಹರ್ಡೇಕರ ಮಂಜಪ್ಪನವರು 'ಬಸವೇಶ್ವರ ಸೇವಾದಳ' ಆರಂಭಿಸಿ ಯುವಕರಲ್ಲಿ ಸಂಘಟನೆ ಮಾಡಿದ್ದರು. ಅವರಿಗೆ ತರಬೇತಿ ನೀಡಿ, ಸೇವಾಮನೋಭಾವ ರೂಢಿಸಿದ್ದರು. ೧೯೪೭ನೇ ಇಸ್ವಿಯಲ್ಲಿ ಅದು ಸ್ಥಗಿತವಾಗಿತ್ತು. ಈ ಯುವ ಸಂಘಟನೆ ಅನುಭವ ಮಂಟಪ ಬಸವಕಲ್ಯಾಣವನ್ನು ಕೇಂದ್ರವಾಗಿಸಿ ಮರುಜನ್ಮತಾಳಿತು. ಪೂಜ್ಯಶ್ರೀ ಚೆನ್ನಬಸವ ಪಟ್ಟದ್ದೇವರು ಗೌ॥ ಅಧ್ಯಕ್ಷರಾಗಿ, ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ಮಾರ್ಗದರ್ಶಕರಾಗಿ ಯುವ ಜನಾಂಗವನ್ನು ಸಂಘಟಿಸಿ, ಬಸವತತ್ವ ಪ್ರಸಾರ, ಪ್ರತಿಯೊಂದು ಗ್ರಾಮ-ಪಟ್ಟಣಗಳಲ್ಲಿ ಬಸವಣ್ಣನವರ ಮೂರ್ತಿ ಅನಾವರಣವಾಗುವಂತೆ ಮಾಡಿದರು.

೧೯೮೬ರಲ್ಲಿ 'ಬಸವದಳ' ಯುವ ಸಂಘಟನೆಯು ತಾತ್ವಿಕ-ಸೈದ್ಧಾಂತಿಕ ಭಿನ್ನಾಭಿಪ್ರಾಯಕ್ಕೊಳಗಾಗಿ ಭಾರತೀಯ ಬಸವದಳ, ರಾಷ್ಟ್ರೀಯ ಬಸವದಳವಾಗಿ

ವಿಭಜಿಸಲ್ಪಟ್ಟವು. ಭಾರತೀಯ ಬಸವದಳವು ಲಿಂಗಾಯತ ಧರ್ಮಕೇಂದ್ರ ಬಸವಕಲ್ಯಾಣ ಅನುಭವ ಮಂಟಪವನ್ನು ಕೇಂದ್ರವಾಗಿಸಿಕೊಂಡರೆ, ರಾಷ್ಟ್ರೀಯ ಬಸವದಳವು ಲಿಂಗಾಯುತ ಧರ್ಮಕ್ಷೇತ್ರ ಕೂಡಲಸಂಗಮದ ಬಸವಧರ್ಮಪೀಠವನ್ನು ಕೇಂದ್ರವಾಗಿಸಿಕೊಂಡು ಅಲ್ಲಲ್ಲಿಯ ಪೂಜ್ಯರುಗಳ ಮಾರ್ಗದರ್ಶನದಲ್ಲಿ ಬಸವತತ್ವ ಪ್ರಸಾರದಲ್ಲಿ ಕ್ರಿಯಾಶೀಲವಾಗಿ ಮುಂದುವರೆದವು.

**ಅನುಭವ ಮಂಟಪದಲ್ಲಿ ವಿಶ್ವಬಸವಧರ್ಮ ಟ್ರಸ್ಟ್ ಸ್ಥಾಪನೆ :** ಕಲಬುರ್ಗಿಯ ಖ್ಯಾತ ವೈದ್ಯರೂ, ಬಸವಭಕ್ತರೂ ಆಗಿದ್ದ ಡಾ॥ ಬಸವನಗೌಡ ಪಟೇಲರು (ಡಾ॥ ಬಿ.ವ್ಹಿ. ಪಟೇಲರು) ತಮ್ಮ ಜೀವಮಾನದ ಕಾಯಕದ ಗಳಿಕೆ–ಉಳಿಕೆಯ ಸಂಪತ್ತನ್ನು (ಅಂದಾಜು ೨೦ ಲಕ್ಷ ರೂಪಾಯಿಗಳನ್ನು) ಅನುಭವ ಮಂಟಪ ಸಂಸ್ಥೆಗೆ ಒಂದು ಟ್ರಸ್ಟ್ ಮಾಡುವದಾದರೆ ಸಮರ್ಪಿಸುವುದಾಗಿ ೧೯೯೦ ರಲ್ಲಿ ಶರಣ ಕಮ್ಮಟದ ಕಾರ್ಯಕ್ರಮ ಸಂದರ್ಭದಲ್ಲಿ ನುಡಿದರು. ಭಾಲ್ಕಿಯ ಪೂಜ್ಯರು, ಶ್ರೀ ಭೀಮಣ್ಣ ಖಂಡ್ರೆಯವರು, ಬಸವಕಲ್ಯಾಣದ ಹಿರಿಯ ಶರಣರು ಟ್ರಸ್ಟ್‌ದ ನಿಯಮಾವಳಿ (ಬಾಯ್‌ಲಾ) ಸಿದ್ಧಪಡಿಸುವ ಜವಾಬ್ದಾರಿಯನ್ನು ಡಾ॥ ಬಿ.ವ್ಹಿ. ಪಟೇಲರಿಗೆ ವಹಿಸಿದರು. ಡಾ॥ ಬಿ. ವ್ಹಿ. ಪಟೇಲರು ನಾಡಿನ ಅನೇಕ ಧರ್ಮ–ಸಂಸ್ಥೆ–ಸಂಘಗಳ 'ಬಾಯ್‌ಲಾ'ಗಳನ್ನು ಸಂಗ್ರಹಿಸಿ, ಶರಣಸಾಹಿತಿಗಳಾದ ಶ್ರೀ ಪಿ. ಎಂ. ಗಿರಿರಾಜು ಮೈಸೂರು, ಪ್ರೊ. ಸಿದ್ಧಣ್ಣ ಲಂಗೋಟಿ. ಡಾ॥ ವಾಯ್. ಬಿ. ಕುಲಗೋಡ ಮುಂತಾದವರೊಂದಿಗೆ ಚರ್ಚಿಸಿ, ಹತ್ತಾರು ಪುಟಗಳಲ್ಲಿ ಬರೆದು, ಹುಮನಾಬಾದಿನ ಖ್ಯಾತ ನ್ಯಾಯವಾದಿಗಳಾಗಿದ್ದ ಶ್ರೀ ವಿರೂಪಕ್ಷಪ್ಪ ಅಗಡಿ ವಕೀಲರ ಸಹಕಾರದೊಂದಿಗೆ ದಿನಾಂಕ ೧೮–೦೧–೧೯೯೧ ರಂದು 'ವಿಶ್ವ ಬಸವ ಧರ್ಮ ಟ್ರಸ್ಟ್' ಎಂಬ ಹೆಸರಿನಲ್ಲಿ ಬಸವಕಲ್ಯಾಣದ ಸಬ್‌ರಜಿಷ್ಟ್ರಾರ್ ಕಛೇರಿಯಲ್ಲಿ ನೋಂದಣಿ (ರಜಿಷ್ಟರ್ಡ್) ಮಾಡಲಾಯಿತು. ಈ ವಿಶ್ವ ಬಸವಧರ್ಮ ಟ್ರಸ್ಟಿಗೆ ಶತಾಯುಷಿ ಪೂಜ್ಯ ಡಾ. ಚೆನ್ನಬಸವ ಪಟ್ಟದ್ದೇವರು ಗೌ॥ ಅಧ್ಯಕ್ಷರಾಗಿ, ಡಾ॥ ಬಿ.ವ್ಹಿ. ಪಟೇಲರು ಅಧ್ಯಕ್ಷರಾಗಿ, ಶರಣ ವಿ. ಸಿದ್ಧರಾಮಣ್ಣ ಮೊದಲ್ಗೊಂಡು ೨೨ ಜನ ಬಸವ ಭಕ್ತರು ಸದಸ್ಯರಾಗಿ ಕಾರ್ಯನಿರ್ವಹಿಸತೊಡಗಿದರು. ಈ ಟ್ರಸ್ಟಿನ ಯೋಜನೆಗಳಿಗಾಗಿ ಅನುಭವ ಮಂಟಪ ಪರಿಸರದಲ್ಲಿ ೩೦ ಎಕರೆ ಭೂಮಿ ಖರೀದಿಸಲಾಯಿತು.

**ರಾಜ್ಯಾದ್ಯಂತ ಬಸವ ಸಂದೇಶ ಯಾತ್ರೆ :** ಪೂಜ್ಯ ಡಾ. ಚೆನ್ನಬಸವ ಪಟ್ಟದ್ದೇವರ ಸದಿಚ್ಛೆಯಂತೆ ವಿಶ್ವ ಬಸವ ಧರ್ಮ ಟ್ರಸ್ಟಿನ ವತಿಯಿಂದ ಕರ್ನಾಟಕದಾದ್ಯಂತ 'ಬಸವ ಸಂದೇಶ ಯಾತ್ರೆ' ಆಯೋಜಿಸಿ 'ಅನುಭವ ಮಂಟಪ'ದ ಪರಿಸರದಲ್ಲಿ ದಾಸೋಹ ಭವನ, ಭಕ್ತರಿಗಾಗಿ ವಸತಿ ಕೋಣೆಗಳನ್ನು ನಿರ್ಮಿಸಲು, ಬಸವದಾಸೋಹ ನಿಧಿ ಸಂಗ್ರಹ, ಮುಂತಾದ ಯೋಜನೆಗಳಿಗಾಗಿ ಹಣ ಸಂಗ್ರಹಿಸಿಲು ನಿರ್ಧರಿಸಲಾಯಿತು. 'ವಿಶ್ವ ಬಸವ ಧರ್ಮ ಟ್ರಸ್ಟಿನ'ನ ಟ್ರಸ್ಟಿಗಳಾಗಿದ್ದ ಪೂಜ್ಯ ಶ್ರೀಮನಿಪ್ರ ಮಹಾಂತ ಶಿವಯೋಗಿಗಳು ಚಿತ್ತರಗಿ ಸಂಸ್ಥಾನಮಠ ಇಳಕಲ್ಲ, ಶರಣ ವಿ. ಸಿದ್ಧರಾಮಣ್ಣ ಶರಣರು, ಡಾ॥ ಬಿ.ವ್ಹಿ. ಪಟೇಲ ಕಾರ್ಯಾಧ್ಯಕ್ಷರ ನೇತೃತ್ವದಲ್ಲಿ ೧೯೯೫ ನೇ ಇಸ್ವಿ ಮಾರ್ಚ

೨೫ ರಿಂದ ಮೇ ೪ ವರೆಗೆ ಅಖಂಡ ೪೦ ದಿನಗಳ ಕಾಲ ಬಸವಕಲ್ಯಾಣದ ಅನುಭವ ಮಂಟಪದಿಂದ ಪ್ರಾರಂಭವಾದ ಯಾತ್ರೆಯು ಬೀದರ ಜಿಲ್ಲೆಯಿಂದ ಮೈಸೂರುವರೆಗೆ, ಮರಳಿ ಬಸವ ಕಲ್ಯಾಣ ಅನುಭವ ಮಂಟಪವರೆಗೆ ಸಂಚರಿಸಿತು. ಈ ಬಸವ ಸಂದೇಶ ಯಾತ್ರೆಯ ಸಂಚಾಲಕರಾಗಿ ಪ್ರೊ. ಸಿದ್ಧಣ್ಣ ಲಂಗೋಟಿ, ವ್ಯವಸ್ಥಾಪಕರಾಗಿ ಶ್ರೀ ಮಡಿವಾಳಯ್ಯ ಹಿರೇಮಠ, ಖಜಾಂಚಿಯಾಗಿ ಶ್ರೀ ಬಸವರಾಜ ನಾಗೂರೆ ನಿವೃತ್ತ ಇಂಜಿನೀಯರ್ ಹಾಗೂ ಅನೇಕ ಶರಣರು, ಪೂಜ್ಯರು ಸಂಚರಿಸಿ, ಅಲ್ಲಲ್ಲಿ ಬಸವತತ್ವ ಪ್ರವಚನ, ವಿ. ಸಿದ್ಧರಾಮಣ್ಣ ಶರಣರಿಂದ ವಚನಸಂಗೀತ, ಬಸವಭಕ್ತಿ ಗೀತೆಗಳ ಹಾಡುವಿಕೆ, ಬಸವ ಪ್ರಜ್ಞೆ ಜಾಗೃತಿಗೈಯುತ್ತಾ ಬರಲಾಯಿತು. ಬಸವ ಭಕ್ತರು ಸ್ವಯಂಪ್ರೇರಣೆಯಿಂದ ನೀಡಿದ ಒಟ್ಟು ೬ ಲಕ್ಷ ರೂಪಾಯಿಗಳಷ್ಟು ಹಣವನ್ನು ವಿಶ್ವ ಬಸವ ಧರ್ಮ ಟ್ರಸ್ಟಿಗೆ ಜಮಾ ಮಾಡಲಾಯಿತು. ಅದರಿಂದಾಗಿ ಒಂದು ಪ್ರಸಾದಕ್ಕಾಗಿ ದಾಸೋಹ ಭವನ, ೨ ಅಂತಸ್ತಿನ ವಸತಿ ಕೋಣೆಗಳು ನಿರ್ಮಾಣಗೊಂಡವು.

**ವಿಶ್ವ ಬಸವ ಧರ್ಮ ಟ್ರಸ್ಟ್ ಅಧ್ಯಕ್ಷರಾಗಿ ಸೇವೆ :** ೧೯೯೯ ಎಪ್ರಿಲ್ ೨೨ ರಂದು ಪೂಜ್ಯ ಶ್ರೀ ಚೆನ್ನಬಸವ ಪಟ್ಟದ್ದೇವರು ತಮ್ಮ ೧೯೯ನೇ ವಯಸ್ಸಿನಲ್ಲಿ, ಮುಂದೆ ಕೆಲವೇ ತಿಂಗಳಲ್ಲಿ ಡಾ॥ ಬಿ.ವ್ಹಿ. ಪಟೇಲರೂ ಬಸವ ಮಹಾಬಯಲಿನಲ್ಲಿ ಬಯಲಾದರು. ಟ್ರಸ್ಟಿನ ಹಿರಿಯರೆಲ್ಲ ಸೇರಿ, ಪೂಜ್ಯ ವಿ. ಸಿದ್ಧರಾಮಣ್ಣ ಶರಣರನ್ನು ಒತ್ತಾಯಪೂರ್ವಕ ಒಪ್ಪಿಸಿ ೨೦೦೦ ಇಸ್ವಿಯಿಂದ ೨೦೦೫ರ ವರೆಗೆ ಒಂದು ಅವಧಿ ಅಧ್ಯಕ್ಷರನ್ನಾಗಿ ಮಾಡಿ, ಕಾರ್ಯ ಮುಂದುವರೆಸಿದರು. ಶರಣರು ಅನುಭವ ಮಂಟಪದ ಸಂಚಾಲಕತ್ವ ದೊಂದಿಗೆ ನಿರಂತರ ಒಬ್ಬಂಟಿಯಾಗಿ ಬಸವಗುರು ಪ್ರಾರ್ಥನೆ, ವಚನಾನುಭಾವ, ಪ್ರಸಾದ ದಾಸೋಹ ವ್ಯವಸ್ಥೆ ಕಲ್ಯಾಣದ ಬಸವ ಭಕ್ತರ ಸಹಕಾರದೊಂದಿಗೆ ಮುನ್ನಡೆಸಿದರು. ಅನಂತರ ೨೦೧೩ ಎಪ್ರಿಲ್ ೨೩ ರಿಂದ ಇಳಕಲ್ಲ ಶ್ರೀ ಮಹಾಂತ ಶಿವಯೋಗಿಗಳು ಅಧ್ಯಕ್ಷರಾಗಿ, ಶರಣೆ ಸುಶೀಲಾದೇವಿ ಬಸವನಗೌಡ ಪಟೇಲ ತಾಯಿಯವರು ಕಾರ್ಯಾಧ್ಯಕ್ಷ ರಾಗಿ ಸೇವೆ ಸಲ್ಲಿಸಿದರು. ಪೂಜ್ಯ ಮಹಾಂತ ಶಿವಯೋಗಿಗಳ ಸದಿಚ್ಛೆ, ಟ್ರಸ್ಟಿಗಳ ಒತ್ತಾಸೆಯಂತೆ– ಪೂಜ್ಯ ಡಾ. ಬಸವಲಿಂಗ ಪಟ್ಟಾಧ್ಯಕ್ಷರು ಈಗ ಅಧ್ಯಕ್ಷರಾಗಿ ಹತ್ತಾರು ವರುಷಗಳಿಂದ ಬಸವತತ್ವ ಪ್ರಸಾರದ ಮಹಾಮಣಿಹ ಮುನ್ನಡೆಸಿದ್ದಾರೆ.

**ಇಳಕಲ್ಲ ಶರಣಸಿದ್ಧಾಂತ ಶಿಬಿರ–ಮಹಾಂತಜೋಳಿಗೆಯ ಬೋಧಕರಾಗಿ :** ಪೂಜ್ಯ ಶ್ರೀಮನಿಪ್ರ ಮಹಾಂತ ಶಿವಯೋಗಿಗಳು ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಪೂಜ್ಯರು ೧೯೭೬ರಲ್ಲಿ ಮಹಾಂತಜೋಳಿಗೆ ಹಾಗೂ ಶರಣಸಿದ್ಧಾಂತ ಶಿವಾನುಭವ ತರಬೇತಿ ಶಿಬಿರಗಳನ್ನು ಆರಂಭಿಸಿದಾಗ, ಈ ಶಿಬಿರಗಳಲ್ಲಿ ಬೋಧಕರಾಗಿ ನಾಡಿನ ಹಿರಿಯ ಶರಣ ಸಾಹಿತಿಗಳಾದ ಪ್ರೊ. ಜಿ. ಎಚ್. ಹನ್ನೆರಡುಮಠ, ಪ್ರೊ. ಬಿ. ಎಂ. ತೆಳಗಡೆ, ಪ್ರೊ. ವ್ಹಿ. ವ್ಹಿ. ಅಲೆಗಾವಿ, ಪ್ರೊ. ಬಿ. ಎಂ. ಮಾಗಿ, ಶ್ರೀ ಶಂಕರಣ್ಣ ನಾಗರಾಳ, ಪ್ರೊ. ಶಂಭು ಬಳಿಗಾರ ಹಾಗೂ ಅನುಭಾವಿಗಳಾದ ವಿ. ಸಿದ್ಧರಾಮಣ್ಣ ಶರಣರು,

ಪ್ರೊ. ವಿ.ವಿ. ಸಂಗಮದ, ಶ್ರೀ ಶಿವಶರಣಪ್ಪ ತರನಳ್ಳಿ, ಶ್ರೀ ಶಿವಾನಂದ ಗುರೂಜಿ, ಶ್ರೀ ಬೆಲ್ದಾಳ ಸಿದ್ಧರಾಮಣ್ಣ ಶರಣರು, ಶ್ರೀ ಎಂ. ಆರ್. ತುಂಬರಗುದ್ದಿ, ಡಾ. ಸ.ಜ. ನಾಗಲೋಟಿಮಠ, ಶ್ರೀ ಲಿಂಗಣ್ಣ ಸತ್ಯಂಪೇಟೆ, ಕುಮಾರ ಕಕ್ಕಯ್ಯಾ ಪೋಳ, ಅಂಬಿಗ ಕುಮಾರಚೌಡಯ್ಯ, ಮಾತೆ ವಾಗ್ದೇವಿ, ಮಾತೆ, ಕುಮುದಿನಿತಾಯಿ, ಶ್ರೀ ಪ.ಮ. ಗುರುಲಿಂಗಯ್ಯ, ಶ್ರೀ ಷಡಕ್ಷರಪ್ಪ, ಶ್ರೀ ಎಸ್. ಎಸ್. ಭೂಸರಡ್ಡಿ, ಶ್ರೀ ಮಠದ ಬಸಯ್ಯ, ಪ್ರೊ. ಕಲ್ಯಾಣಮ್ಮ ಲಂಗೋಟಿ, ಶ್ರೀ ಡಿ. ಎಂ. ಧನ್ನೂರ, ಶ್ರೀ ಅಂ.ಹಾ. ಹುಚ್ಚಪ್ಪ ಮೇಷ್ಟ್ರು, ಪ್ರೊ. ಸಿದ್ಧಣ್ಣ ಲಂಗೋಟಿ ಸಂಚಾಲಕರು, ಶ್ರೀ ಮಲ್ಲಯ್ಯ ಗಣಾಚಾರಿ ಮುಂತಾದ ಶರಣರು ಅನುಭಾವ ಪಾಠ ಮಾಡುತ್ತಿದ್ದರು. ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ಇಷ್ಟಲಿಂಗಪೂಜಾ ಪ್ರಾತ್ಯಕ್ಷಿಕತೆ ಪಾಠ ಮಾಡಿಸುತ್ತಿದ್ದರು. ಮಹಾಂತ ಜೋಳಿಗೆ-ಕಾರ್ಯಕ್ರಮಗಳಲ್ಲಿ ನಿರಂತರವಾಗಿ ದುರ್ವ್ಯಸನ-ದುರಾಚಾರಗಳ ಕುರಿತು ಮನಂಬುಗುವಂತೆ ಮಾತನಾಡಿ, ಸ್ವರಚಿತ ಎರಡು ಕವನಗಳನ್ನು- 'ಬೀಡಿ ಬೀಡಿ ಬೀಡಿ, ಎಲ್ಲಿಂದ ಬಂದೆಲೆ ಖೋಡಿ' ಹಾಗೂ 'ಶೆರೆಯ ಸಂಕೋಲೆಗೆ ಗುರಿಯಾಯ್ತು ಸರಕಾರ, ಕಳೆದುಕೊಂಡಿತದು ಈಗ ನೀತಿ ತತ್ವವ ಪೂರಾ' ಕಂಚಿನ ಕಂಠದಿಂದ ಹಾಡಿ, ಜನರು ಚಟಗಳನ್ನು ಮಹಾಂತ ಜೋಳಿಗೆಗೆ ಹಾಕುವಂತೆ ಮೋಡಿ ಮಾಡುತ್ತಿದ್ದರು. ಕರ್ನಾಟಕ, ತೆಲಂಗಾಣು, ಆಂಧ್ರ, ಮಹಾರಾಷ್ಟ್ರ ಗಳಲ್ಲೆಲ್ಲ ಶರಣರು ಶಿಬಿರಗಳಿಗೆ ಬಂದಿದ್ದಾರೆ. ಪೂಜ್ಯ ಮಹಾಂತ ಶಿವಯೋಗಿಗಳ ಆತ್ಮೀಯ ಶರಣರಲ್ಲಿ ಒಬ್ಬರಾಗಿದ್ದರು. ಪೂಜ್ಯ ಮಹಾಂತ ಅಪ್ಪಗಳ ಬಗ್ಗೆ- "ಮಹಾಂತ ಮಹಾಂತ ಮಹಾಂತ, ಅಪ್ಪ ನೀನೆಂತಹ ಧೀಮಂತ" ಎಂಬ ಕವಿತೆ ಬರೆದು ಪೂಜ್ಯರ ಅಮೃತಮಹೋತ್ಸವದಲ್ಲಿ ಭಕ್ತಿಪೂರ್ವಕ ಹಾಡಿ ಅರ್ಪಿಸಿದ್ದರು.

**ಕಲ್ಯಾಣ ನಾಡಿನ ಶರಣ ಸಮ್ಮೇಲನಗಳು :** ಪರಮಪೂಜ್ಯ ಭಾಲ್ಕಿಯ ಶ್ರೀ ಚೆನ್ನಬಸವ ಪಟ್ಟದ್ದೇವರ ಗೌ॥ ಅಧ್ಯಕ್ಷತೆಯಲ್ಲಿ ೧೯೭೭ರಲ್ಲಿ ಪ್ರಾರಂಭವಾಗಿದ್ದ 'ಕಲ್ಯಾಣ ನಾಡಿನ ಶರಣ ಪರಿಷತ್ತು, ಬಸವಕಲ್ಯಾಣ' ಇದು ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ಹೊಸದಿಲ್ಲಿ ಗಳಲ್ಲಿ ೨೫ಕ್ಕೂ ಮೇಲ್ಪಟ್ಟು ಶರಣ ಸಮ್ಮೇಲನಗಳನ್ನು ಸಂಘಟಿಸಿತ್ತು. ಈ ಸಮ್ಮೇಲನಗಳಲ್ಲಿ ಷಟ್‌ಸ್ಥಲ ಧ್ವಜಗೀತೆ, ಬಸವಗುರು ಮಂಗಲ ಮುಂತಾದ ಸ್ವರಚಿತ ಹಾಡುಗಳನ್ನು ಹಾಡಿ ಜರನಲ್ಲಿ ಬಸವಭಕ್ತಿ ಉದಯಿಸುವಂತೆ ಮಾಡುತ್ತಿದ್ದವರು ವಿ. ಸಿದ್ಧರಾಮಣ್ಣ ಶರಣರು.

**ಬಸವಭೂಮಿಯ ಶರಣ ಸಮ್ಮೇಲನಗಳು :** ನಮ್ಮ ಧಾರವಾಡದ ಬಸವತತ್ವ ಪ್ರಸಾರ ಸಂಸ್ಥೆಯ ಶಾಖೆಯಾಗಿದ್ದ ಜಮಖಂಡಿಯ ಬಸವ ತತ್ವ ಪ್ರಸಾರ ಸಂಸ್ಥೆಯ ಅಧ್ಯಕ್ಷರಾದ ಶ್ರೀ ತಾತಾಸಾಹೇಬ ಬಾಂಗಿ ವಕೀಲರು ಪ್ರತಿ ವರುಷ ಬಸವಭೂಮಿಯ ಶರಣ ಸಮ್ಮೇಲನ ಆಯೋಜಿಸುತ್ತಿದ್ದರು. ಜಮಖಂಡಿ, ಕೂಡಲಸಂಗಮ, ಹುಲಸೂರು, ಶ್ರೀಶೈಲ-ಕದಳಿವನ, ಬಸವನ ಬಾಗೇವಾಡಿ, ಹಂಪಿ ಮುಂತಾದಡೆಗಳಲ್ಲಿ ಸಮ್ಮೇಳನ ಆಯೋಜಿಸಿದಾಗ ಅಲ್ಲಿಗೆಲ್ಲ ಆಗಮಿಸಿ ವಾರಗಟ್ಟಲೆ ಬಸವ ಸಂದೇಶ ಪಾದಯಾತ್ರೆಗಳಲ್ಲಿ ನೇತೃತ್ವವಹಿಸಿ, ಬಸವಭಕ್ತಿಗೀತೆಗಳನ್ನು ಹಾಡುತ್ತಾ, ಅನುಭಾವ ನೀಡುತ್ತಿದ್ದರು.

**ಅನುಭವ ಮಂಟಪದಲ್ಲಿ ೭೭೦ ಬಸವಭಕ್ತರಿಂದ ಇಷ್ಟಲಿಂಗ ಪೂಜೆ :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರು 'ನೂತನ ಅನುಭವ ಮಂಟಪದಲ್ಲಿ ೭೭೦ ಅಮರಗಣಂಗಳ ಇಷ್ಟಲಿಂಗ ಪೂಜೆ' ನಡೆಯಬೇಕು ಎಂಬ ಅಂತಃಪ್ರೇರಣೆಯಾಗಲು, ಇಷ್ಟಲಿಂಗ ಪೂಜಾ ಅನುಷ್ಠಾನ ಸತ್ಯಾಗ್ರಹ ಕೈಕೊಂಡರು. ಭಾಲ್ಕಿ ಹಿರೇಮಠದಲ್ಲಿದ್ದ ಪೂಜ್ಯ ಚೆನ್ನಬಸವ ಪಟ್ಟದ್ದೇವರು ಆಗಮಿಸಿದರು. ಒಂದೇ ವಾರದಲ್ಲಿ ಈ ಸಮಾರಂಭ ಯೋಜಿಸಿ, ೭೭೦ ಶರಣ-ಶರಣೆಯರು ಸಾಮೂಹಿಕ ಇಷ್ಟಲಿಂಗ ಪೂಜೆ ಮಾಡಿಕೊಂಡರು. ಪೂಜ್ಯರು ಸಾವಿರಾರು ಭಕ್ತರಿಗೆ ಪ್ರಸಾದ-ದಾಸೋಹ ವ್ಯವಸ್ಥೆಯನ್ನು ಮಾಡಿದ್ದರು.

**ಶ್ರೀಶೈಲ ಕದಳಿವನಕ್ಕೆ ಬಸವಭಕ್ತರೊಂದಿಗೆ ಯಾತ್ರೆ :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ಪೂಜ್ಯ ಭಾಲ್ಕಿ ಚೆನ್ನಬಸವ ಪಟ್ಟದ್ದೇವರ ನೇತೃತ್ವದಲ್ಲಿ ಒಮ್ಮೆ, ಪೂಜ್ಯ ಲಿಂಗಾನಂದ ಸ್ವಾಮಿಗಳು ಹಾಗೂ ಪೂಜ್ಯ ಮಾತೆ ಮಹಾದೇವಿಯವರೊಂದಿಗೆ ಒಮ್ಮೆ, ಪೂಜ್ಯ ಮಹಾಂತ ಶಿವಯೋಗಿಗಳೊಂದಿಗೆ ಒಮ್ಮೆ, ಹೀಗೆ ಮೂರು ಸಲ ಶರಣೆ ಅಕ್ಕಮಹಾದೇವಿ ತಾಯಿಯವರು ಲಿಂಗೈಕ್ಯರಾದ ಶ್ರೀಶೈಲ-ಕದಳಿವನ ಯಾತ್ರೆ ಕೈಕೊಂಡು-ಅಕ್ಕಮಹಾದೇವಿ ನಾಟಕ ಬರೆದು, ರಂಗಭೂಮಿಯ ಮೇಲೆ ಪ್ರಯೋಗವನ್ನೂ ಮಾಡಿಸಿದ್ದರು. ಎರಡು ಸಲ ವಿ. ಸಿದ್ಧರಾಮಣ್ಣ ಶರಣರೊಂದಿಗೆ ಕದಳಿವನ ಯಾತ್ರೆಯಲ್ಲಿ ಭಾಗವಹಿಸಿ, ನಾವು ಪ್ರೊ. ಸಿದ್ಧಣ್ಣ ಹಾಗೂ ಪ್ರೊ. ಕಲ್ಯಾಣಮ್ಮ ಲಂಗೋಟಿ ದಂಪತಿಗಳು ಅಲ್ಲಿ ಅನುಭಾವ ನೀಡಿದ್ದೇವೆ. (ಕದಳಿ ವನದಲ್ಲಿ ಜರುಗಿದ ಬಸವಭೂಮಿಯ ೫ನೇ ಶರಣ ಸಮ್ಮೇಳನದ ಸರ್ವಾಧ್ಯಕ್ಷೆಯಾಗಿ ಪ್ರೊ. ಕಲ್ಯಾಣಮ್ಮ ಅನುಭಾವ ನೀಡಿದ್ದರು.)

**ಭಾರತದ ರಾಜಧಾನಿ ದಿಲ್ಲಿಗೆ ಶರಣರು :** ಅಂತರಾಷ್ಟ್ರೀಯ ಕಲಾವಿದರಾಗಿದ್ದ ಶ್ರೀ ಈಶ್ವರ ಮುರಗೋಡ ಹಾಗೂ ಶ್ರೀ ಭೀಮರಾವ ಮುರಗೋಡ ಅವರು ದಿಲ್ಲಿಯಲ್ಲಿ ಬುದ್ಧ-ಬಸವ-ಅಂಬೇಡ್ಕರ-ರೈದಾಸ ಅವರ ಸಮಾಜೋ-ಧಾರ್ಮಿಕ ಪ್ರಗತಿಪರ ತತ್ವಗಳ ತಳಹದಿಯ ಮೇಲೆ 'ಸಮಾಜ ಸುಧಾರಣಾ ಆಂದೋಲನ' ಎಂಬ ಸಂಸ್ಥೆಯನ್ನು ಹುಟ್ಟು ಹಾಕಿದ್ದರು. ಅವರು ಬಸವಕಲ್ಯಾಣ ಅನುಭವ ಮಂಟಪಕ್ಕೆ ಬಂದು ಭಾಲ್ಕಿಯ ಪೂಜ್ಯರನ್ನು ಹಾಗೂ ವಿ. ಸಿದ್ಧರಾಮಣ್ಣ ಶರಣರನ್ನು ಹೊಸದಿಲ್ಲಿಗೆ ಬರಬೇಕೆಂದು ಆಮಂತ್ರಣ ನೀಡಿದ್ದರು.

ಶರಣ ಮಾದಾರ ಚೆನ್ನಯ್ಯ ಜಯಂತಿಗೆ-ದಿಲ್ಲಿಯ ಕೆಂಪುಕೋಟೆ ಮೈದಾನದಲ್ಲಿ ಆಯೋಜಿಸಿದ್ದ ಕಾರ್ಯಕ್ರಮಕ್ಕೆ ಒಂದು ಸಲ; ಮತ್ತೊಮ್ಮೆ ರಾಷ್ಟ್ರಪತಿ ಗ್ಯಾನಿ ಜೇಲಸಿಂಗರು ಆಗಮಿಸಿದ್ದ ದಿಲ್ಲಿ ಕರ್ನಾಟಕ ಭವನದಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಪೂಜ್ಯ ಚೆನ್ನಬಸವ ಪಟ್ಟದ್ದೇವರೊಂದಿಗೆ 'ಬಸವಜಯಂತಿ' ಕಾರ್ಯಕ್ರಮಕ್ಕೆ ಹೋಗಿ ಅನುಭಾವ ನೀಡಿ, ವಚನಸಂಗೀತ ಹಾಡಿ ಬಂದಿದ್ದರು. ದಿಲ್ಲಿಯಲ್ಲಿ ನೆಲೆಸಿರುವ ಶ್ರೀ ವೈಜನಾಥ ಬಿರಾದಾರ ಅವರ ಮನೆಯಲ್ಲಿ ಸ್ನಾನ-ಪೂಜೆ-ಪ್ರಸಾದ ಮಾಡಿದ್ದರು.

**ದಾವಣಗೆರೆ ಬಸವ ಬಳಗದಲ್ಲಿ ಶರಣರು :** ದಾವಣಗೆರೆಯಲ್ಲಿ ಹಿರಿಯ ಶರಣರಾಗಿದ್ದ ಶ್ರೀ ಬಸವರಾಜಪ್ಪ ಅಜ್ಜಂಪುರಶೆಟ್ರ ಮನೆತನವು ೨೦ನೇ ಶತಮಾನದಲ್ಲಿ 'ಬಸವ ಮಹಾಮನೆ' ಎಂದೇ ಖ್ಯಾತಿಯನ್ನು ಪಡೆದಿತ್ತು. ಈ ಮನೆತನಕ್ಕೆ ಪೂಜ್ಯ ಅಥಣಿ ಶಿವಯೋಗಿಗಳು, ಪೂಜ್ಯ ಬೀಳೂರ ಗುರುಬಸವ ಸ್ವಾಮಿಗಳು ಶತಮಾನದ ಹಿಂದೆಯೇ ದಯಮಾಡಿಸಿ ಪೂಜೆ-ಪ್ರಸಾದ ಸ್ವೀಕರಿಸಿ ಅಪ್ಪ ಬಸವಣ್ಣನವರ ವಚನ-ಅನುಭಾವ ಮಾಡಿ, ಆಶೀರ್ವದಿಸಿದ್ದರು. ೧೯೭೦ ರಿಂದ ಶ್ರೀ ಅಜ್ಜಂಪುರಶೆಟ್ರ ಮನೆಯಲ್ಲಿಯೇ ಪೂಜ್ಯ ವಿ. ಸಿದ್ಧರಾಮಣ್ಣ ಶರಣರು, ಶಿವಾನಂದ ಗುರೂಜಿ, ಪ್ರೊ. ವಿ.ವಿ. ಸಂಗಮದ, ಪ್ರೊ. ಸಿದ್ಧಣ್ಣ ಲಂಗೋಟಿ, ಶ್ರೀ ಪಾಂಡೋಮಟ್ಟಿ ಚೆನ್ನಬಸವ ಶಿವಯೋಗಿಗಳು, ಮಠದ ಬಸವಯ್ಯನವರು ವಾಸ್ತವ್ಯ ಮಾಡುತ್ತಿದ್ದರು. ದಾವಣಗೆರೆಯ ಬಸವಬಳಗ ಹಿರಿಯ ಶರಣರಾದ ಶ್ರೀ ಹೆಚ್. ಎಂ. ಸ್ವಾಮಿ, ಶ್ರೀ ಕೋಗುಂಡಿ ಹಾಲಪ್ಪ, ಪ್ರೊ. ಸಿ.ಎನ್. ಹಿರೇಮಠ, ಶ್ರೀ ದೇವಿಗೆರೆ ವೀರಭದ್ರಪ್ಪ, ಶ್ರೀ ಅಂ. ಹಾ. ಹುಚ್ಚಪ್ಪ, ಶ್ರೀ ಮಹಾರುದ್ರಯ್ಯನವರು, ಶ್ರೀ ಪಿ. ರುದ್ರಪ್ಪನವರು, ಶರಣೆ ಭುವನೇಶ್ವರಿತಾಯಿ, ಶ್ರೀ ಅಗಡಿ ಮಹಾಂತೇಶ ಮುಂತಾದವರು ವಿ. ಸಿದ್ಧರಾಮಣ್ಣ ಶರಣರಿಗೆ ಆತ್ಮೀಯರಾಗಿದ್ದರು.

ಪೂಜ್ಯ ವಿ. ಸಿದ್ಧರಾಮಣ್ಣ ಶರಣರಿಗೆ ೨೮-೦೨-೨೦೧೦ ರಂದು ಕಾರು ಅಪಘಾತದಲ್ಲಿ ತಲೆ ಹಾಗೂ ಕೈಗೆ ಪೆಟ್ಟಾದಾಗ, ಅವರನ್ನು ದಾವಣಗೆರೆಗೆ ಕರೆದೊಯ್ದು ತಜ್ಞ ವೈದ್ಯರಿಂದ ಮೆದುಳಿನ ಶಸ್ತ್ರಕ್ರಿಯೆ ಮಾಡಿಸಿ, ಬದುಕಿಸಿಕೊಂಡರು. ವರ್ಷಾನುಗಟ್ಟಲೆ ಶರಣರ ಆರೈಕೆ ಸೇವೆ ಮಾಡಿದ ಶ್ರೀ ಸಿದ್ಧಮಲ್ಲಣ್ಣ ಅಜ್ಜಂಪುರಶೆಟ್ರು ಸಿದ್ಧರಾಮಣ್ಣ ಶರಣರನ್ನು ಉಳಿಸಿದರು. ತಾವು ೨೦೧೨ ರಲ್ಲಿ ಬಸವ ಮಹಾಬಯಲಲ್ಲಿ ಬಯಲಾದರು. ಅವರ ಇಚ್ಛೆಯಂತೆ 'ಅಜ್ಜಂಪುರಶೆಟ್ರ ಸೇವಾ ಟ್ರಸ್ಟ್' ಸ್ಥಾಪನೆಯಾಗಿ ನಿರಂತರ ವರ್ಷಕ್ಕೆ ಎರಡು ಸಲ ನಾಡಿನಾದ್ಯಂತ 'ಶರಣ ತತ್ವ ಕಮ್ಮಟ' ಶಿಬಿರ ಆಯೋಜಿಸುತ್ತಿದ್ದಾರೆ.

ದಾವಣಗೆರೆ ಬಸವಬಳಗದವರು ಸರಸ್ವತಿ ನಗರ ಬಡಾವಣೆಯಲ್ಲಿ- ವಿಶಾಲವಾದ ಸ್ಥಳದಲ್ಲಿ ವಿದ್ಯಾರ್ಥಿನಿಯರ ಹಾಸ್ಟೇಲ್, ಅನುಭವ ಮಂಟಪ ನಿರ್ಮಿಸಿದ್ದರು. ಪೂಜ್ಯ ವಿ. ಸಿದ್ಧರಾಮಣ್ಣ ಶರಣರನ್ನು ಅಲ್ಲಿ ಎಲ್ಲ ರೀತಿಯ ಅನುಕೂಲ ಒದಗಿಸಿದರು. ನೂರಾರು ವಿದ್ಯಾರ್ಥಿನಿಯರಿಗೆ ಪ್ರತಿದಿನ ಬೆಳಿಗ್ಗೆ-ಸಂಜೆ ಬಸವಗುರು ಪ್ರಾರ್ಥನೆ, ವಚನ ಸಂಗೀತ, ವಚನ ಅನುಭಾವ ಮಾಡುತ್ತಿದ್ದರು.

**ಚಿತ್ತರಗಿಯಲ್ಲಿ ಬಸವಕೇಂದ್ರ ಆರಂಭಿಸಿದ್ದು :** ಪೂಜ್ಯಶ್ರೀ ಮಹಾಜಗದ್ಗುರು ಲಿಂಗಾನಂದ ಸ್ವಾಮಿಗಳು ಚಿತ್ರದುರ್ಗ ಜಿಲ್ಲೆಯ ಹಿರಿಯೂರದಲ್ಲಿ ಪ್ರವಚನದಲ್ಲಿದ್ದ ಕಾಲದಲ್ಲಿ ೧೯೯೫ ಜೂನ್ ೩೦ ರಂದು ಲಿಂಗೈಕ್ಯರಾಗಿದ್ದರು. ನಾಡಿನ ಬಸವಭಕ್ತರೆಲ್ಲ ದುಃಖಿತರಾದರು. ಇದಾದ ಮರುವರುಷ ೧೯-೦೮-೧೯೯೬ರಲ್ಲಿ ಪೂಜ್ಯ ಜಗದ್ಗುರು ಮಾತೆ ಮಹಾದೇವಿಯವರು ಬಸವಣ್ಣನವರ ವಚನಾಂಕಿತ 'ಕೂಡಲಸಂಗಮದೇವ' ಬದಲಾಯಿಸಿ 'ಲಿಂಗದೇವಾ' ಎಂದು 'ಬಸವ ವಚನ ದೀಪ್ತಿ' ಗ್ರಂಥ ಪ್ರಕಟಿಸಿದಾಗ, ನಾಡಿನ ಬಸವಭಕ್ತರಲ್ಲಿ ಗೊಂದಲವುಂಟಾಯಿತು. ೧೯೯೭ ಜನೇವರಿ ೧೦ ರಿಂದ

೧೫ರ ವರೆಗೆ ವಿ. ಸಿದ್ಧರಾಮಣ್ಣ ಶರಣರು, ಸಿದ್ಧಣ್ಣ ಲಂಗೋಟಿ, ವಿ.ವಿ. ಸಂಗಮದ ಶರಣರು ನಾವೆಲ್ಲ ಚಿತ್ತರಗಿ ಶ್ರೀ ವಿಜಯಮಹಾಂತೇಶ ಸಂಸ್ಥಾನಮಠದಲ್ಲಿ ಒಂದು ವಾರ 'ಮಹಾಂತ ಜೋಳಿಗೆ' ಕಾರ್ಯಕ್ರಮ ಹಾಕಿಕೊಳ್ಳಲಾಗಿತ್ತು. ೧೯೯೭ ಜನೇವರಿ ೧೪ ಶರಣಮೇಳ ದಲ್ಲಿ ಭಾಗವಹಿಸಿದ್ದ ಇಳಕಲ್ಲ, ಗದಗ, ನಿಡಸೋಸಿ, ಬೆಂಗಳೂರು, ಬಾಗಲಕೋಟೆ, ಕೆ.ಆರ್.ಪೇಟೆ, ಹಾಲ್ವಿ, ಹುಲಸೂರ ಮುಂತಾದ ಪೂಜ್ಯರು 'ಶರಣಮೇಳ'ದಿಂದ ಅದನ್ನು ಪ್ರತಿಭಟಿಸಿ ಕೂಡಲಸಂಗಮದಿಂದ ಚಿತ್ತರಗಿಗೆ ಬಂದರು. ಬಸವತತ್ವನಿಷ್ಠರು ಮಾತಾಜಿಯವರ ಈ ಕಾರ್ಯದಿಂದ ಮನನೊಂದು ಹೊರಬಂದರು. ಈ ಸಂದರ್ಭದಲ್ಲಿ ಬಸವಭಕ್ತರು ಒಂದಾಗಿ ಸಂಘಟಿತರಾಗಿ ಬಸವತತ್ವ ಪ್ರಸಾರ ಕಾರ್ಯ ಮುಂದುವರೆಸಿ ಕೊಂಡು ಹೋಗಬೇಕೆಂಬ ಸದುದ್ದೇಶದಿಂದ ೧೯೯೭ ಜನೇವರಿ ೧೫ ರಂದು ಚಿತ್ತರಗಿಯಲ್ಲಿ 'ಬಸವ ಕೇಂದ್ರ' ಎಂಬ ಹೊಸ ಸಂಸ್ಥೆಯನ್ನು ಪೂಜ್ಯರೆಲ್ಲರ ಸಮ್ಮುಖದಲ್ಲಿ ಜ್ಯೋತಿ ಬೆಳಗಿ ಉದ್ಘಾಟಿಸಲಾಯಿತು. ವಿ. ಸಿದ್ಧರಾಮಣ್ಣ ಶರಣರು 'ಜ್ಯೋತಿ ಜಗವ ಬೆಳಗೆ, ಬಸವನ ಜ್ಯೋತಿ ಜಗವ ಬೆಳಗೆ' ಎಂದು ಕಲಬುರ್ಗಿಯ ಶರಣ ಪ್ರೊ. ಮಾಣಿಕರಾವ ಧನಾಶ್ರೀ ಅವರು ರಚಿಸಿದ್ದ ಗೀತೆಯನ್ನು ಹಾಡಿದರು. [ಬಸವಕೇಂದ್ರ ಸ್ಥಾಪಿಸುವ ವಿಚಾರದಿಂದ ಘಟನಾವಳಿಯನ್ನು ಹಿಂದಿನ ರಾತ್ರಿ ಬರೆದು ಸಿದ್ದಪಡಿಸಿದ್ದ] ನಾನು ೧೫-೦೧-೧೯೯೭ ರಂದು ಬೆಳಿಗ್ಗೆ ಪೂಜ್ಯರ ಸಮ್ಮುಖದಲ್ಲಿ ಓದಿದೆ. ಕೆಲವು ಸಲಹೆ ಸೂಚನೆಕೊಟ್ಟರು. 'ಬಸವಕಲ್ಯಾಣ ಅನುಭವ ಮಂಟಪ'ವು ಬಸವಕೇಂದ್ರದ ಮೂಲ ಕಾರ್ಯಾಲಯವಾಗಬೇಕು ಎಂದು ನಿರ್ಧರಿಸಲಾಯಿತು.

**'ಲಿಂಗಾಯತ ಸ್ವತಂತ್ರ ಧರ್ಮ' ಹೋರಾಟ :** 'ಲಿಂಗಾಯತ ಸ್ವತಂತ್ರ ಧರ್ಮ' ಮಾನ್ಯತೆಗಾಗಿ ಕಲಬುರ್ಗಿಯಲ್ಲಿ ನಡೆದ ಹೋರಾಟ ಕಾಲಕ್ಕೆ ಬಸವಭಕ್ತರ ಒತ್ತಾಸೆಯಂತೆ, ಸುಪ್ರಿಂಕೋರ್ಟ ಆದೇಶದಂತೆ ಪೂಜ್ಯ ಮಹಾಜಗದ್ಗುರು ಮಾತೆ ಮಹಾದೇವಿಯವರು 'ಲಿಂಗದೇವ' ವಚನಾಂಕಿತ ಹಿಂಪಡೆದರು. ಬಸವಭಕ್ತರು ಸಂತಸಪಟ್ಟರು. ಪೂಜ್ಯ ವಿ. ಸಿದ್ಧರಾಮಣ್ಣ ಶರಣರಂತೂ- ಅಭಿಮಾನದಿಂದ ಈ ಪದ್ಯ ಹಾಡಿದರು.

## ಬಸವ ಧರ್ಮ ಬಂಧುಗಳೆ ಒಂದಾಗಿರಿ

**ರಾಗ-ಚಾಂದ್** **ತಾಳ – ಅಭಂಗ**

ಓ... ಬಸವಧರ್ಮ ಬಂಧುಗಳೆ ಒಂದಾಗಿರಿ
ಮತ್ತೆ ಶರಣರಾಜ್ಯ ಕಟ್ಟಲೆದ್ದೇಳಿರಿ ॥ಪ॥

ಜಾತಿಯೆಂಬ ಕಟ್ಟ ಹರಿದು ಹೊರಗೆ ಬನ್ನಿರಿ
ಶ್ರೇಷ್ಠ ವೀರಧರ್ಮವೆಂಬ ಧ್ವಜವ ಹಿಡಿಯಿರಿ ॥೧॥

ಮಂಗಲಾತ್ಮ ರೂಪವಾದ ಲಿಂಗ ಧರಿಸಿರಿ
ಬಸವ ಗುರುವಿನಾಣತಿಯನು ಮರೆಯ ಬೇಡಿರಿ ॥೨॥

ಇಷ್ಟ ಪ್ರಾಣ ಭಾವಲಿಂಗ ಗುಟ್ಟು ತಿಳಿಯಿರಿ
ಕಾಯಕವೆ ಕೈಲಾಸವೆಂಬ ಮಂತ್ರ ಸಾರಿರಿ ॥೩॥

ಹೃದಯವೆಂಬ ಮಹಾಮನೆಯ ಕದವ ತೆರೆಯಿರಿ
ವಿಶ್ವಮಾನವರನೆಲ್ಲ ಒಳಗೆ ಕರೆಯಿರಿ ॥೪॥

ಗುರು ವಿರಕ್ತರೆಂಬ ಭಾವ ಭ್ರಮೆಯ ತೊರೆಯಿರಿ
ಲಿಂಗವಿದ್ದ ನಾವೆಲ್ಲ ಒಂದೆ ಎನ್ನಿರಿ ॥೫॥

ಸತ್ಯವೆಂಬ ಹರಿತ ಖಡ್ಗ ಕೈಲಿ ಹಿಡಿಯಿರಿ
ಅಸತ್ಯ ಅನ್ಯಾಯಗಳ ಕಡಿದು ಚೆಲ್ಲಿರಿ ॥೬॥

ವೀರ ಗಣಾಚಾರ ತತ್ತ್ವ ನಮ್ಮದೆನ್ನಿರಿ
ಕ್ರೌರ್ಯವಲ್ಲ ಶೌರ್ಯವೆಂಬುದನ್ನು ತೋರಿರಿ ॥೭॥

ಶರಣಧರ್ಮಕ್ಕಾಗಿ ಪ್ರಾಣ ಪಣವ ನೀಡಿರಿ
ಹರಳಯ್ಯ ಮಧುವಯ್ಯಗಳ ಸ್ಮರಣೆ ಗೈಯಿರಿ ॥೮॥

ಹದ್ದು ಹಾವು ಕಾಗೆಯಂತೆ ಬಾಳಬೇಡಿರಿ
ಶರಣರೊಪ್ಪುವಂತೆ ಬಾಳಿ ಲಿಂಗೈಕ್ಯರಾಗಿರಿ ॥೯॥

ಎಂದು ಭಾವತುಂಬಿ ಹಾಡಿ, ಬಸವಪರ ಎಲ್ಲ ಸಂಘಟನೆಗಳು ನಮ್ಮವು, ಎಲ್ಲರೂ ನಮ್ಮವರೆಂದು ಹೃದಯಾರೆ ಮಾತನಾಡಿದರು. ತಮ್ಮ ಗುರುಬಂಧುವಾಗಿದ್ದ ಮಾತಾಜಿಯವರಿಗೆ ಗೌರವಪೂರ್ವಕ ಶರಣು ಅರ್ಪಿಸಿದರು. ಪೂಜ್ಯ ಮಾತಾಜಿಯವರೊಂದಿಗೆ ತಾತ್ವಿಕ-ಸೈದ್ಧಾಂತಿಕ ಭಿನ್ನಾಭಿಪ್ರಾಯಗಳಿದ್ದವೇ ವಿನಃ ವೈಯಕ್ತಿಕ ರಾಗ-ದ್ವೇಷಗಳಿರಲಿಲ್ಲ. ಅವರು ಮಾಡಿದ ಬಸವತತ್ವ ಪ್ರಸಾರದ ಕಾರ್ಯವನ್ನು ಗೌರವಿಸುತ್ತಿದ್ದರು.

**'ಬಸವಾನುಭಾವಿ' ಗೌರವ ಅಭಿನಂದನ ಗ್ರಂಥ :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ೯೨ ವರುಷ ತುಂಬಿ ೯೩ ಕ್ಕೆ ಪಾದಾರ್ಪಣೆ ಮಾಡಿದಾಗ ೧೪-೦೧-೨೦೧೩ ರಂದು ಅವರ ಜೀವನ-ಸಾಧನೆಯ ಕುರಿತು ಒಂದು ಅಭಿನಂದನ ಗ್ರಂಥ ತರುವುದು, ಅವರ ಪ್ರಕಟಿತ-ಅಪ್ರಕಟಿತ ಗ್ರಂಥಗಳ ಮುದ್ರಣ ಮಾಡುವುದು ಎಂಬ ಯೋಚನೆ ನನ್ನಲ್ಲಿ ಉಂಟಾಯಿತು. ೪-೫ ದಶಕಗಳಿಂದ ನಾವು ಸಿದ್ಧಣ್ಣ-ಕಲ್ಯಾಣಮ್ಮ ದಂಪತಿಗಳು ಪೂಜ್ಯ ವಿ ಸಿದ್ಧರಾಮಣ್ಣ ಶರಣರ ಒಡನಾಟದಲ್ಲಿ-ಬೆಳೆದು ಬಂದವರಾಗಿದ್ದೆವು. ಅವರನ್ನು

ನಾವು 'ಶರಣ ತಂದೆ' ಎಂದು ಗೌರವ-ಭಕ್ತಿಯಿಂದ ಆದರಿಸುತ್ತಿದ್ದೆವು. ಲಿಂಗಾಯತ ಮನೆತನದ ಸಂಪ್ರದಾಯದಂತೆ ಚಾಂದಕವತೆಯಲ್ಲಿ ನಮ್ಮ ವಿವಾಹವಾಗಿದ್ದರೆ, ಬಸವತತ್ವದಂತೆ ಬಸವಕಲ್ಯಾಣದಲ್ಲಿ ಪುಷ್ಪವೃಷ್ಟಿಯೊಂದಿಗೆ ಪೂಜ್ಯ ಚೆನ್ನಬಸವ ಪಟ್ಟದ್ದೇವರ ಸಾನಿಧ್ಯದಲ್ಲಿ ನಮ್ಮ ಕಲ್ಯಾಣಮಹೋತ್ಸವ ಮಾಡಿದ ಶರಣ ತಂದೆ ವಿ. ಸಿದ್ಧರಾಮಣ್ಣ ಅಪ್ಪಗಳು.

ಪೂಜ್ಯ ವಿ. ಸಿದ್ಧರಾಮಣ್ಣ ಶರಣರ ಅಭಿನಂದನ ಗೌರವ ಗ್ರಂಥ **'ಬಸವಾನುಭಾವಿ'**ಗೆ ಒಂದು ಲಕ್ಷ ರೂ. ನೀಡುವದಾಗಿ ಪೂಜ್ಯ ಮಹಾಂತ ಶಿವಯೋಗಿಗಳು ನುಡಿದುದಲ್ಲದೇ ಅಭಿನಂದನ ಸಮಾರಂಭ ಭಾಲ್ಕಿ ಹಿರೇಮಠದಲ್ಲಿ ಚೆನ್ನಬಸವ ಪಟ್ಟದ್ದೇವರ ಆಶ್ರಮದಲ್ಲಿ ಮಾಡುವುದು ಸೂಕ್ತ ಎಂದು ಹೇಳಿದರು. ಆ ಪ್ರಕಾರ ನಾನು ಭಾಲ್ಕಿಗೆ ಹೋಗಿ, ಪೂಜ್ಯ ಬಸವಲಿಂಗ ಪಟ್ಟದ್ದೇವರೊಂದಿಗೆ ವಿಷಯ ತಿಳಿಸಿದಾಗ, ಶರಣರನ್ನು ಗೌರವಿಸುವ ಭಾಗ್ಯ ನಮ್ಮ ಪಾಲಿಗೆ ಬಂದುದು ನಮ್ಮ ಪುಣ್ಯವಿಶೇಷವೇ ಆಗಿದೆ ಎಂದು ಒಪ್ಪಿಕೊಂಡರು.

'ಬಸವಾನುಭಾವಿ' ಅಭಿನಂದನ ಗೌರವ ಗ್ರಂಥಕ್ಕೆ ಸಂಪಾದಕತ್ವದ ಸಂಪೂರ್ಣ ಜವಾಬ್ದಾರಿ ವಹಿಸಿದೆ. ಡಾ. ಕಲ್ಯಾಣಮ್ಮ ಲಂಗೋಟಿ ಅವರು 'ಕವಿಗಳ ದೃಷ್ಟಿಯಲ್ಲಿ ವಿ. ಸಿದ್ಧರಾಮಣ್ಣ ಶರಣರು' ಕುರಿತು ಶರಣ ವೀರಶೆಟ್ಟಿ ಬಾವುಗೆ ಅವರು 'ಆಧುನಿಕ ವಚನಕಾರರ ದೃಷ್ಟಿಯಲ್ಲಿ ವಿ. ಸಿದ್ಧರಾಮಣ್ಣ ಶರಣರು' ಕುರಿತು ಕಾರ್ಯನಿರ್ವಹಿಸಲು ಸಹಕರಿಸಿದರು. ನಾಡಿನ ಬಸವಭಕ್ತರು ಹಾಗೂ ಶರಣರ ಒಡನಾಡಿಗಳಿಗೆ ಪತ್ರ ಬರೆಯಲಾಯಿತು. ೧೩ ಜನ ಪೂಜ್ಯರು, ೭೦ ಜನ ಗದ್ಯ ಲೇಖಕರು, ೧೭ ಜನ ಕವಿಗಳು, ೪೯ ಜನ ಆಧುನಿಕ ವಚನಕಾರರ ಬರಹಗಳು ಬಂದವು. ೪೧೬ ಪುಟಗಳ 'ಬಸವಾನುಭಾವಿ' ಗೌರವ ಗ್ರಂಥ ಸಿದ್ಧವಾಯಿತು. ಶರಣ ಸಿದ್ಧರಾಮಣ್ಣನವರ ಒಡನಾಟದ ಅಮೂಲ್ಯ ಫೋಟೋ ಗಳನ್ನು ಹುಡುಕಿ ಸಂಗ್ರಹಿಸಲಾಯಿತು. ನನ್ನ ಕೋರಿಕೆಯಂತೆ ಪೂಜ್ಯ ಶರಣರು ತಮ್ಮ ಬಾಲ್ಯದಿಂದ ಹಿಡಿದು ಇಂದಿನವರೆಗಿನ 'ಆತ್ಮ ನಿವೇದನೆ' ಅನುಭವಗಳನ್ನು ಬರೆದರು.

ವಿ. ಸಿದ್ಧರಾಮಣ್ಣ ಶರಣರು ಬರೆದ ಒಟ್ಟು ೨೧ ಕೃತಿಗಳಿಗೆ ಪ್ರಕಟನಾ ದಾಸೋಹಿಗಳು ೩೦ ಸಾವಿರದಿಂದ ೫೦ ಸಾವಿರವರೆಗೆ ಒಂದೊಂದು ಗ್ರಂಥಕ್ಕೆ ದಾಸೋಹ ಮಾಡಿದರು. ಇಳಕಲ್ಲದ ಪೂಜ್ಯ ಮಹಾಂತ ಶಿವಯೋಗಿಗಳು 'ಬಸವಾನುಭಾವಿ' ಅಭಿನಂದನ ಗ್ರಂಥಕ್ಕೆ ೧ ಲಕ್ಷ ೨೫ ಸಾವಿರ ರೂ.ಗಳನ್ನು ನೀಡಿದರು. ಅವರೆಲ್ಲರ ವಿವರ ಹೀಗಿದೆ–

| **೧) ನಾಟಕಗಳು** | **ಪ್ರಕಟನಾ ದಾಸೋಹಿಗಳು** |
|---|---|
| ೧. ವಿಶ್ವಾತ್ಮ ಬಸವೇಶ್ವರ | – ಶ್ರೀ ವಿವೇಕಾನಂದ ಕೋಟೆ, ಬೀದರ. |
| ೨. ಷಣ್ಮುಖ ಶಿವಯೋಗಿಗಳು | – ಶ್ರೀ ಗುರುಬಸಪ್ಪ ಗಣ್ಣೂರ, ವಿಜಯಪುರ. |
| ೩. ಶಿವಶರಣ ನನ್ನಯ್ಯ | – ಶ್ರೀ ಪಿ. ಎಂ. ಕಣವಿ, ರಾಮದುರ್ಗ. |

೪. ಶರಣ ಅಂಬಿಗರಚೌಡಯ್ಯ – ಶ್ರೀ ಎಸ್.ಎಂ. ಹಾದಿಮನಿ, ಬೆಟಗೇರಿ–ಗದಗ.
೫. ಶಿವಶರಣ ಹರಳಯ್ಯ – ಶ್ರೀ ಅಶೋಕ ಗಂದಿಗುಡೆ, ಬೀದರ.
೬. ಶರಣ ಮಾದಾರ ಚನ್ನಯ್ಯ – ಶ್ರೀ ಅಶೋಕ ಹೂಗಾರ, ಗುಡ್ಡೇವಾಡಿ.
೭. ಅರಿದೊಡೆ ಶರಣ – ಡಾ. ರೇಖಾ ಮ. ಕೋಟೂರ, ಧಾರವಾಡ.
೮. ಶರಣೆ ಅಕ್ಕಮಹಾದೇವಿ – ಶ್ರೀ ವೈಜನಾಥ ಸಾಲಿ, ಬೀದರ
೯. ಮಡಿವಾಳ ಮಾಚಿದೇವರು – ಶ್ರೀ ಗುರುನಾಥ ಗಡ್ಡೆ, ಬಸವಕಲ್ಯಾಣ
೧೦. ಕೊಟ್ಟೂರ ಗುರುಬಸವೇಶ್ವರರು – ಶರಣೆ ವೈ.ಎನ್. ಗಾಯತ್ರಿ, ಮತ್ತಿಹಳ್ಳಿ.
೧೧. ತಿಂಥಿಣಿ ಮೌನೇಶ್ವರರು – ಶ್ರೀ ಮಾಣಿಕಪ್ಪ ಬಿರಾದಾರ, ಉದಗೀರ
೧೨. ಕುಂಬಾರ ಗುಂಡಯ್ಯ – ಶ್ರೀ ಮಹಾದೇವ ಕುಂಬಾರ, ಹುಕ್ಕೇರಿ.
೧೩. ಮೋಳಿಗೆ ಮಾರಯ್ಯ – ಶ್ರೀ ವಿಶ್ವನಾಥಪ್ಪ ಬಿರಾದಾರ, ಭಾಲ್ಕಿ

**೨) ಕಾವ್ಯಗಳು :**

೧೪. ಬಸವಭಕ್ತಿ ಗೀತೆಗಳು – ಡಾ. ಕಲ್ಯಾಣಮ್ಮ ಲಂಗೋಟಿ, ರಾಮದುರ್ಗ.
೧೫. ವಿ. ಸಿದ್ಧರಾಮಣ್ಣರ ವಚನಗಳು– ಶ್ರೀ ಬಸವರಾಜ ಚಾಂದಕವಠೆ, ಗುಡ್ಡೇವಾಡಿ.

**೩) ತಾತ್ವಿಕ ಕೃತಿಗಳು :**

೧೬. ಇಷ್ಟಲಿಂಗ ಸ್ವ–ಸ್ವರೂಪ ಪೂಜೆ – ಡಾ. ನೀಲಾಂಬಿಕಾ ಪಾಟೀಲ, ಧಾರವಾಡ.
೧೭. ಗುರುಬಸವ ಪ್ರಾರ್ಥನೆ – ಶ್ರೀ ಶಂಕರರಾವ್ ನಾವದಗೆರೆ, ಹಿಪ್ಪಳಗಾಂವ.
೧೮. ಭಕ್ತದರ್ಶನ – ಡಾ॥ ವಾಯ್.ಬಿ. ಕುಲಗೋಡ, ರಾಮದುರ್ಗ.
೧೯. ಬಸವೇಶ್ವರ ಘನಲಿಂಗ ಸಂಪಾದನೆ – ಶ್ರೀ ದೇವಿಗೆರೆ ವೀರಭದ್ರಪ್ಪ, ದಾವಣಗೆರೆ
೨೦. ಹಡಪದ ಲಿಂಗಮ್ಮರ ವಚನಾನುಭಾವ – ಶ್ರೀ ಶಂಕರಣ್ಣ ಕೋಳಕೂರು, ಬಸವಕಲ್ಯಾಣ.
೨೧. ಬಸವಾದಿ ಶರಣರ ವಚನಾಂಕಿತ ತತ್ವದರ್ಶನ –ಶರಣೆ ಪುಟ್ಟಮ್ಮ ಮತ್ತು ಶರಣ ಬಸವರಾಜಪ್ಪ ಅಜ್ಜಂಪುರಶೆಟ್ರ ಸೇವಾ ಟ್ರಸ್ಟ್ (ರಿ), ದಾವಣಗೆರೆ.
೨೨. ಬಸವಾನುಭಾವಿ (ಅಭಿನಂದನ ಗ್ರಂಥ)–ಪೂಜ್ಯಶ್ರೀ ಮಹಾಂತ ಶಿವಯೋಗಿಗಳು, ಚಿತ್ತರಗಿ ಸಂಸ್ಥಾನಮಠ, ಇಳಕಲ್ಲ.

ಈ ರೀತಿಯಾಗಿ ಕೇವಲ ೬ ತಿಂಗಳಲ್ಲಿ ೨೨ ಗ್ರಂಥಗಳ ಪ್ರಕಟಣೆ ಹಾಗೂ ಲೋಕಾರ್ಪಣೆಯು ದಿನಾಂಕ ೨೨–೧೨–೨೦೧೩ ರಂದು ಭಾಲ್ಕಿ ಹಿರೇಮಠದ ಶ್ರೀ ಚೆನ್ನಬಸವಾಶ್ರಮದ ವಿಶಾಲವಾದ ಮೈದಾನದಲ್ಲಿ ಅದ್ದೂರಿಯಾಗಿ ಜರುಗಿತು.

ಪೂಜ್ಯ ಬಸವಲಿಂಗಪಟ್ಟದ್ದೇವರ ಹಾಗೂ ನಾಡಿನ ಎಲ್ಲ ಪೂಜ್ಯರ, ಶರಣರ, ಅನುಭಾವಿಗಳ ನೇತೃತ್ವದಲ್ಲಿ–ನಾಡಿನಾದ್ಯಂತದಿಂದ ಆಗಮಿಸಿದ ಲಕ್ಷಾಂತರ ಬಸವಭಕ್ತರ ಸಮ್ಮುಖದಲ್ಲಿ ಪೂಜ್ಯ ವಿ. ಸಿದ್ಧರಾಮಣ್ಣ ಶರಣರನ್ನು ಗೌರವ–ಸತ್ಕಾರ ಮಾಡಿ, "ಬಸವಾನುಭಾವಿ" ಗೌರವ ಗ್ರಂಥ ಲೋಕಾರ್ಪಣೆ ಮಾಡಲಾಯಿತು.

**ಗದಗ ತೋಂಟದಾರ್ಯಮಠದ "ಲಿಂಗಾಯತ ಪುಣ್ಯ ಪುರುಷ ಸಾಹಿತ್ಯ ರತ್ನ" ಮಾಲೆಯ ೩೧೫ನೇ ಗ್ರಂಥ– ವಿ. ಸಿದ್ಧರಾಮಣ್ಣ ಶರಣರು :** ಬಸವ ಪರಂಪರೆಯ ಗದಗ–ಡಂಬಳದ ಜಗದ್ಗುರು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ಅಪೇಕ್ಷೆಯಂತೆ– ಅವರ ಸಂಸ್ಥಾನಮಠದ 'ಲಿಂಗಾಯತ ಪುಣ್ಯಪುರಷ ಸಾಹಿತ್ಯ ರತ್ನ ಮಾಲೆಯ ೩೧೫ನೇ ಕೃತಿಯಾಗಿ 'ಬಸವಾನುಭಾವಿ ವಿ. ಸಿದ್ಧರಾಮಣ್ಣ ಶರಣರು' ಎಂಬ ೧೧೬ ಪುಟಗಳ ಪುಸ್ತಕ ಬರೆದು ಕಳಿಸಿದೆ. ದಾವಣಗೆರೆಯ 'ಅಜ್ಜಂಪುರ ಶೆಟ್ರ ಸೇವಾ ಟ್ರಸ್ಟ್'ನವರು ಪ್ರಕಟನಾ ದಾಸೋಹ ಸೇವೆಗೈದರು. ೨೦೧೮ನೇ ಇಸ್ವಿಯಲ್ಲಿ ತೋಂಟದಾರ್ಯ ಮಠದ ಜಾತ್ರಾಮಹೋತ್ಸವದಲ್ಲಿ ಪುಸ್ತಕ ಲೋಕಾರ್ಪಣೆಯಾಯಿತು. ಪೂಜ್ಯ ಜಗದ್ಗುರುಗಳು ವಿ. ಸಿದ್ಧರಾಮಣ್ಣ ಶರಣರಿಗೆ ಗೌರವ ಸತ್ಕಾರ ಮಾಡಿದರು.

**ಆಧುನಿಕ ವಚನಕಾರ ಶರಣರು :** ೨೦ನೇ ಶತಮಾನದ ಆಧುನಿಕ ಹಿರಿಯ ವಚನಕಾರರಾದ ಹರ್ಡೇಕರ ಮಂಜಪ್ಪ, ಜೀರಗೆಕಟ್ಟೆ ಬಸವಪ್ಪ, ಸಿದ್ಧಯ್ಯ ಪುರಾಣಿಕ, ಮಹಾದೇವ ಬಣಕಾರ, ಕುಮಾರ ಕಕ್ಕಯ್ಯಪೋಳ, ಅಂಬಿಗ ಕುಮಾರ ಚೌಡಯ್ಯ, ಸಂಗಮೇಶ ಹೊಸಮನಿ ಮುಂತಾದವರ ಸಮಕಾಲೀನರಲ್ಲಿ ವಿ. ಸಿದ್ಧರಾಮಣ್ಣ ಶರಣರೂ ಒಬ್ಬ ಆಧುನಿಕ ವಚನಕಾರರಾಗಿ ಕಂಗೊಳಿಸುತ್ತಾರೆ. 'ಲೋಕಗುರು ಬಸವ ಪ್ರಭುವೆ' ಅಂಕಿತದಲ್ಲಿ ನೂರಾರು ವಚನಗಳನ್ನು ಬರೆದಿದ್ದಾರೆ.

–೧–

ಅರಿವು ಆಚಾರ ಅನುಭಾವವುಳ್ಳ
ಸತ್ಯ ಶರಣರ ಸಂಗದಲ್ಲಿ
ನಿತ್ಯ ಭೃತ್ಯನಾಗಿರಿಸಯ್ಯಾ
ಲೋಕ ಗುರು ಬಸವಪ್ರಭುವೆ

–೨–

ಇಷ್ಟಲಿಂಗವಿದು ವಿಶ್ವಚೈತನ್ಯದ ಕುರುಹು,
ಇರಬೇಕು ಲಿಂಗಧಾರಿಗಳಿಗೆಲ್ಲಾ ಇದರ ಅರಿವು.
ಈ ಅರಿವಿನೊಳಗಿದೆ ನಮ್ಮ ಇರವು.
ನಮ್ಮ ಇರುವಿನಲ್ಲಿಯೇ ಅಡಗಿದೆ
ವಿಶ್ವಬ್ರಹ್ಮಾಂಡವನ್ನೇ ತುಂಬಿದ
ಬಸವಗುರುವಿನ ಹರಹು.
ಇದೇ ಲಿಂಗಭಕ್ತರ ನಿಜದ ನಿಲವು ನೋಡಾ
ಲೋಕಗುರು ಬಸವಪ್ರಭುವೆ.

-೩-

ಸತ್ಯ ಶರಣರು ಎಂದೂ ಸತ್ತರೆಂದೆನಬೇಡ
ಸತ್ತು ಸತ್ತು ಹುಟ್ಟುವವರಿಗಿದು ಗುರುತಿಲ್ಲ ನೋಡಾ !
ಮರೆದ ಮಾನವರನ್ನು ಅರಿವಿನ ಎಡೆಗೊಯ್ಯಲು ಬಂದ
ಸತ್ಯ ಚಿದ್ರೂಪರು ನೋಡಾ ನಮ್ಮ ಶರಣರು!
ಇಂತು ನಿಜಲಿಂಗ ಶರೀರಿಗಳು ಸತ್ತರೆಂದು
ಚೀರಾಡಿ ವ್ಯರ್ಥ ನೀ ಕೆಡಬೇಡ.
ಲೋಕಗುರು ಬಸವಪ್ರಭುವಿನಲಿ ತಿಳಿದು ನೋಡಾ!

**ನಾನೋ ನೀನೋ ಲಿಂಗವಂತ** ? : ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳು ಚಿತ್ತರಗಿ-ಇಳಕಲ್ಲ ಅವರು ಜಾತಿ-ಮತ ಭೇದವೆಣಿಸದೇ ಎಲ್ಲ ಬಸವಭಕ್ತ ಶರಣಜೀವಿಗಳನ್ನು ಬಸವತತ್ವದಂತೆ 'ನಮ್ಮವರೆಂದು' ಅಪ್ಪಿಕೊಂಡವರಾಗಿದ್ದರು. ವಿಪ್ರ ಮೊದಲು ಅಂತ್ಯಜಕಡೆಯಾಗಿ ಎಲ್ಲ ಜನಾಂಗಗಳ ಶರಣರು ಪೂಜ್ಯರ ಜೊತೆ ಪೂಜೆ-ಪ್ರಸಾದದಲ್ಲಿ ಭಾಗಿಯಾಗಿರುತ್ತಿದ್ದರು. ಒಂದು ಸಲ ಒಬ್ಬ ಅಜ್ಞಾನಿ ಖಾನೆಸುಮಾರಿ ಲಿಂಗವಂತನೊಬ್ಬ 'ಇವರು ಹುಟ್ಟಿನಿಂದ ಲಿಂಗವಂತರಲ್ಲ' ಎಂದು ನುಡಿದಾಗ, ವಿ. ಸಿದ್ಧರಾಮಣ್ಣ ಶರಣರು ಅವರ ಅಜ್ಞಾನಕ್ಕೆ ಕನಿಕರಪಟ್ಟು, ನ್ಯಾಯ ನಿಷ್ಠುರರಾಗಿ ಅಂದೇ ಒಂದು ಕವಿತೆ ಬರೆದು ಸಂಜೆಯ ಕಾರ್ಯಕ್ರಮದಲ್ಲಿ ಹಾಡಿಯೇ ಬಿಟ್ಟರು. ರಾತ್ರಿ ಪೂಜಾ-ಪ್ರಸಾದ ಕಾಲಕ್ಕೆ ಆ ಮಹಾಶಯರು ಶರಣರ ಪಾದಕ್ಕೆ ಶರಣೆಂದು ತಮ್ಮ ತಪ್ಪನ್ನು ತಿದ್ದಿಕೊಂಡು ಕ್ಷಮೆ ಕೇಳಿದರು. ಆ ಕವಿತೆಯು ಎಲ್ಲ ಲಿಂಗವಂತರಿಗೂ ಎಚ್ಚರಿಕೆಯ ಗಂಟೆಯಾಗಿದೆ-

ನಾನೋ ನೀನೋ ಲಿಂಗವಂತ? ನೀ ತಿಳಿದುಕೋ
ಸತ್ಯವನ್ನು ಅರಿತು ನಿನ್ನ ಅಜ್ಞಾನ-ಪಾಪ ಕಳೆದುಕೊ ॥

ಲಿಂಗವಂತ ಎಂಬುದೊಂದು ಜಾತಿ ಎಂದು ತಿಳಿದಿ ನೀನು
ಲಿಂಗವಂತ ಎಂಬುದಿದುವೆ ಧರ್ಮವೆಂದು ಅರಿದೆ ನಾನು ॥೧॥

ಹುಟ್ಟಿನಿಂದ ಲಿಂಗವಂತನೆಂದು ವಾದ ಮಾಡುವೆ ನೀನು
ದೀಕ್ಷೆಯಿಂದ ಲಿಂಗವಂತನೆಂದು ಸತ್ಯ ಸಾರುವೆ ನಾನು ॥೨॥

ಇಷ್ಟಲಿಂಗ ಕಿರಿದು ಮಾಡಿ ನೆಟ್ಟಲಿಂಗಕ್ಕೆ ಹೋಗುವೆ ನೀನು
ಇಷ್ಟಲಿಂಗ ಒಂದರಲ್ಲಿಯೇ ವಿಶ್ವವೆಲ್ಲ ಕಾಂಬೆ ನಾನು ॥೩॥

ಅಂಗದಲ್ಲಿ ಲಿಂಗವಿರಲು ಭಕ್ತ ಭೇದ ಮಾಡುವೆ ನೀನು
ಲಿಂಗವಿದ್ದ ಭಕ್ತರೆಲ್ಲ ಒಂದೇ ಎಂದು ತಿಳಿವೆ ನಾನು ॥೪॥

ಅಟ್ಟಹಾಸದಿಂದ ಮೆರೆವ ಖೊಟ್ಟಿಗಳ ಗುರುವೆಂಬೆ ನೀನು

ಶ್ರೇಷ್ಠ ಲಿಂಗತತ್ವ ಪೇಳುವ ಭಕ್ತರೇ ಗುರುವೆಂಬೆ ನಾನು ॥೫॥

ಸ್ಥಾವರಕ್ಕೆ ಹಾಲನೆರೆದು ಸಾವಿಗೆ ತುತ್ತಾದೆ ನೀನು
ಚೇತನಕ್ಕೆ ಹಾಲು ಕುಡಿಸಿ ಚೈತನ್ಯವ ಪಡೆದೆ ನಾನು ॥೬॥

ಗುರು ಲಿಂಗ ಜಂಗಮವ ಬೇರೆ ಎಂದು ನುಡಿವೆ ನೀನು
ಗುರು ಲಿಂಗ ಜಂಗಮವ ಒಂದೆಂದು ನನ್ನೊಳಗೆ ಕಂಡೆ ನಾನು ॥೭॥

ಲಿಂಗಾಯತ ಧರ್ಮ ಗುರು ಹಲವರೆಂದು ಬಗೆದೆ ನೀನು
ಲಿಂಗವಂತಕ್ಕೆ ಗುರುವು ಬಸವಣ್ಣನೊಬ್ಬನೆಂದು ಸಾರುವೆ ನಾನು ॥೮॥

ಹೊರಗೆ ದೇವನನ್ನು ಹುಡುಕಿ ಹೊರಗಾಗಿ ಬಗೆದೆ ನೀನು
ಒಳಗೆ ದೇವನನ್ನು ಕಂಡು ಒಳಹೊರಗೊಂದಾದೆ ನಾನು ॥೯॥

ಬಸವನಾಮವನ್ನು ಜರಿದು ಭವದ ಹುಳುವಾದೆ ನೀನು
ಬಸವ ಬಸವ ಎನುತೆ ಬಯಲಿನೊಳು ಬಯಲಾಗಿ ಬೆರೆದೆ ನಾನು ॥೧೦॥

**ಮಾನವರೆಲ್ಲ ಹಾಲುಮತದವರು :** ಪೂಜ್ಯ ಶರಣರು ಬಸವಕಲ್ಯಾಣ ಅನುಭವ ಮಂಟಪದಲ್ಲಿ ಬಸವಗುರು ಪ್ರಾರ್ಥನೆ, ವಚನ ಅನುಭಾವ ಮಾಡುತ್ತಿದ್ದಾಗ, ಅನುಭವ ಮಂಟಪ ನೋಡಲು ಆಗಮಿಸಿದ್ದ ಕೆಲವರು ಭಕ್ತರು–ಶರಣರೆ ತಾವು ಹಾಲುಮತದವರೆಂದು ಕೇಳಿದ್ದೇವೆ, ಇದು ನಿಜವೇ ಎಂದು ಪ್ರಶ್ನಿಸಿದರು. ಆಗ ಶರಣರು– “ಹೌದು ಶರಣರೆ, ನಾನು, ನೀವು, ಅಷ್ಟೇ ಏಕೆ ಈ ಲೋಕದಲ್ಲಿರುವ ಮಾನವರೆಲ್ಲರೂ ತಾಯಿಯ ಗರ್ಭದಿಂದ ಜನಿಸಿ ಬಂದು, ತಾಯಿಯ ಮೊಲೆಹಾಲು ಕುಡಿದೇ ಬೆಳೆದಿದ್ದೇವೆ. ಯಾರು ತಾಯಿಯ ಎದೆ ಹಾಲು ಕುಡಿದಿರುವರೋ ಅವರೆಲ್ಲರೂ ಹಾಲುಮತದವರೇ, ನಾವೆಲ್ಲರೂ ಮನುಜಮತ–ವಿಶ್ವಮಾನವರು, ವಿಶ್ವಗುರು ಅಪ್ಪ ಬಸವಣ್ಣನವರ ಪರಂಪರೆಯವರು” ಎಂದು ಮನಂಬುಗುವಂತೆ ತಿಳಿಸಿ ಹೇಳಿದರು. ಲೋಕಾನುಭವ–ಶಿವಾನುಭವದ ಕೂಡಲಸಂಗಮವಾಗಿದ್ದರು ವಿ. ಸಿದ್ಧರಾಮಣ್ಣ ಶರಣರು.

**ಸಿದ್ಧ–ಕಲ್ಯಾಣ ಗೌರವ ಗ್ರಂಥಕ್ಕೆ ಕಾರಣೀಕರ್ತರು :** ೨೦೧೯ ರಲ್ಲಿ ಭಾರತದಾದ್ಯಂತ–ಜಗತ್ತಿನಾದ್ಯಂತ ‘ಕೊರೋನಾ’ ರೋಗ ಹಬ್ಬಿದಾಗ, ಕೋಟಿ–ಕೋಟಿ ಜನ ಈ ರೋಗಕ್ಕೆ, ಈ ರೋಗದ ಭಯಾನಕತೆಗೆ ಭಯ–ಭೀತರಾಗಿ ಮರಣಕ್ಕೊಳಗಾದರು. ಇದೇ ಕಾಲಕ್ಕೆ ನಾನೂ ‘ಕೊರೋನಾ’ ರೋಗ ಪೀಡಿತನಾಗಿ, ರಾಮದುರ್ಗ ಆಸ್ಪತ್ರೆಯಲ್ಲಿ ಗುಣವಾಗದೇ ಇದ್ದಾಗ ಡಾ॥ ವಾಯ್.ಬಿ. ಕುಲಗೋಡ ಅವರು ಬೆಳಗಾವಿಯ ‘ಲೇಕವ್ಯೂ’ ಆಸ್ಪತ್ರೆಗೆ ಸೇರಿಸಿದರು. ಅಲ್ಲಿ ಆಸ್ಪತ್ರೆಯಲ್ಲಿ ಅರೆಪ್ರಜ್ಞಾವಸ್ಥೆ–ಪ್ರಜ್ಞಾವಸ್ಥೆಯಲ್ಲಿ ಬಳಲುತ್ತಿರುವಾಗ ಡಾ॥ ಶಶಿಕಾಂತ ಕುಲಗೋಡ ಹಾಗೂ ಸಂಗಡಿಗ ವೈದ್ಯರು ಹಗಲಿರುಳು ಚಿಕಿತ್ಸೆ ನೀಡಿದರು. ಪ್ರತಿದಿನ ಬೆಳಿಗ್ಗೆ ವಿ. ಸಿದ್ಧರಾಮಣ್ಣ ಅಪ್ಪಗಳು ಮೊಬೈಲ್ ಮೂಲಕ ಬಸವ

ಗುರು ಮಂತ್ರ ಪಠಿಸುತ್ತಾ, 'ಕೊಲುವೆನೆಂಬ ಭಾಷೆ ದೇವನಾದರೆ ಗೆಲುವೆನೆಂಬ ಭಾಷೆ ಭಕ್ತನದು, ಸತ್ಯವೆಂಬ ಕೂರಲಗನೇ ತಳೆದು ಸದ್ಭಕ್ತರು ಗೆದ್ದರು ಕಾಣಾ, ಕೂಡಲಸಂಗಮ ದೇವಾ' ಎಂದು ವಚನ ಅನುಭಾವ ಮಾಡುತ್ತಾ ಧೈರ್ಯ-ಆತ್ಮವಿಶ್ವಾಸ ತುಂಬುತ್ತಾ ಬಂದರು. ನಾನಿದ್ದ ಆಸ್ಪತ್ರೆಯ ಸ್ಪೇಶಲ್ ರೂಮಿನಲ್ಲಿ ಬೆಳಗಾವಿಯ ಪ್ರಸಿದ್ಧ ನ್ಯಾಯವಾದಿ ಗಳಾಗಿರುವ ಶ್ರೀ ಪ್ರಭುಸ್ವಾಮಿ ದಳವಾಯಿಮಠ ಅವರೂ ಇನ್ನೊಂದು ಬೆಡ್ (ಹಾಸಿಗೆ) ಮೇಲಿದ್ದರು. ಅವರೂ ಕೊರೋನಾ ಪೀಡಿತರಾಗಿ ಅಂದೇ ಆಸ್ಪತ್ರೆಗೆ ದಾಖಲಾಗಿದ್ದರು. ಅವರೂ ಬಸವಾದಿ ಶರಣರ ವಚನ ಚಿಂತಕರೂ ಆಗಿದ್ದರು. ವಿ. ಸಿದ್ಧರಾಮಣ್ಣ ಶರಣರ ವಚನ ಅನುಭಾವ ಕೇಳುತ್ತಾ, ಬಸವಾದಿ ಶರಣರ ವಚನಾನುಭಾವ, ಓಂ ನಮಃ ಶಿವಾಯ ಬಸವ - ಮಂತ್ರ ಜಪಿಸುತ್ತಾ, ಪರಸ್ಪರರು ಒಂದು ವಾರದಲ್ಲಿ ಗುಣಮುಖರಾದೆವು. ಶರಣರ ಕರುಣೆಯಿಂದ ಪವಾಡಸದೃಶವಾಗಿ ಬದುಕಿದೆವು.

ಒಂದು ತಿಂಗಳ ನಂತರ ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ಫೋನ ಮಾಡಿ- ಶರಣರೇ, ನೀವು ಕಳೆದ ೫೦ ವರುಷಗಳಿಂದ ಬಸವಧರ್ಮ-ಸಿದ್ಧಾಂತ-ತತ್ವಪ್ರಸಾರ ಮಾಡುತ್ತಾ, ನೂರಾರು ಪುಸ್ತಕ, ಲೇಖನ ಬರೆದಿರುವಿರಿ, ಪೂಜ್ಯ ಹಳಕಟ್ಟಿ ಶರಣರ, ಹರ್ಡೇಕರ ಮಂಜಪ್ಪ ಶರಣರ, ಉತ್ತಂಗಿ ಚೆನ್ನಪ್ಪ ಶರಣರ ಶತಮಾನೋತ್ಸವ ಆಚರಿಸಿ, ಗ್ರಂಥ ಬರೆದಿರುವಿರಿ, ಶಿವಾನಂದ ಗುರೂಜಿ ಅವರ 'ಶಿವಸುಮ' ಅಭಿನಂದನ ಗ್ರಂಥ, 'ಬಸವಾನುಭಾವಿ' ಎಂಬ ನನ್ನ ಕುರಿತು ಅಭಿನಂದನ ಗ್ರಂಥ ಹೊರತಂದಿರುವಿರಿ. ನೀವೀಗ ಸಾವನ್ನು ಗೆದ್ದು ಬಂದ ಸಿದ್ಧರಾಗಿದ್ದೀರಿ. ನಿಮಗೆ ೭೦ ವರುಷ ತುಂಬಿದ ಈ ಸಂದರ್ಭದಲ್ಲಿ ಶರಣ ದಂಪತಿಗಳಾಗಿರುವ ನಿಮ್ಮ ಗೌರವ ಅಭಿನಂದನ ಗ್ರಂಥ ಸಿದ್ಧಪಡಿಸಲು ಕಲ್ಯಾಣ ನಾಡಿನ ಶರಣ ವೀರಶೆಟ್ಟಿ ಬಾವುಗೆ ಅವರು ನನ್ನೊಂದಿಗೆ ಚರ್ಚಿಸಿದ್ದಾರೆ. ನೀವು 'ಬೇಡ' ಎನ್ನಬೇಡಿರಿ. ನಿಮ್ಮ ಗ್ರಂಥಕ್ಕೆ 'ಸಿದ್ಧ-ಕಲ್ಯಾಣ' ಎಂದು ಹೆಸರೂ ಕೂಡ ತಿಳಿಸಿದ್ದೇನೆ ಎಂದು ಅಪ್ಪಣೆ ಮಾಡಿದರು.

ಪೂಜ್ಯ ವಿ. ಸಿದ್ಧರಾಮಣ್ಣ ಶರಣರ, ಪೂಜ್ಯ ಶಿವಾನಂದ ಗುರೂಜಿಯವರ, ಪೂಜ್ಯ ಡಾ. ಬಸವಲಿಂಗ ಪಟ್ಟದ್ದೇವರ, ಪೂಜ್ಯ ಗುರುಮಹಾಂತ ಸ್ವಾಮಿಗಳವರ ಗೌರವಾಧ್ಯಕ್ಷತೆಯಲ್ಲಿ- ಕಲ್ಯಾಣ ಕರ್ನಾಟಕದ ಶರಣ ಸಾಹಿತಿ ಶ್ರೀ ವೀರಶೆಟ್ಟಿ ಬಾವುಗೆ ಸಾ. ಭಾಲ್ಕಿ ಹಾಗೂ ಉತ್ತರ ಕರ್ನಾಟಕದ ಕವಯಿತ್ರಿ ಪ್ರೊ. ಪ್ರಭಾವತಿ ಕಣವಿ ಸಾ. ರಾಮದುರ್ಗ ಇವರ ಸಂಪಾದಕತ್ವದಲ್ಲಿ ಒಂದು ವರ್ಷದಲ್ಲಿ **'ಸಿದ್ಧ-ಕಲ್ಯಾಣ'**ವೆಂಬ ೧೦೦೮ ಪುಟಗಳ ಬೃಹತ್ ಅಭಿನಂದನ ಗ್ರಂಥ ಸಿದ್ಧವಾಯಿತು. ಇದರಲ್ಲಿ ೪೪ ಜನ ಪೂಜ್ಯ ಗುರುಗಳು, ಇಬ್ಬರು ಸಂಪಾದಕರು, ೪ ಜನ ಗೌರವಾಧ್ಯಕ್ಷರು, ೨೫೦ ಜನ ಸಾಹಿತಿ-ಶರಣ ಬಂಧುಗಳು, ೬೫ ಜನ ಕವಿಗಳು, ೩೧ ಜನ ಆಧುನಿಕ ವಚನಕಾರರು ಕನ್ನಡದಲ್ಲಿ ಲೇಖನ-ಕವಿತೆ-ವಚನ ಬರೆದಿರುವರು. ಹಿಂದಿಯಲ್ಲಿ ೬ ಜನ ಸಾಹಿತಿಗಳು, ಮರಾಠಿಯಲ್ಲಿ ೬ ಜನ ಸಾಹಿತಿಗಳು, ಇಂಗ್ಲೀಷಿನಲ್ಲಿ ೫ ಜನ ವಿದ್ವಾನ್ ಸಾಹಿತಿಗಳು

ಜಮ್ಮು-ಕಾಶ್ಮೀರ, ಮಹಾರಾಷ್ಟ್ರ, ಕರ್ನಾಟಕ, ಆಂಧ್ರ-ತೆಲಂಗಾಣುಗಳ ಆತ್ಮೀಯರು ನಮ್ಮ ಕಿರಿಯ ಸಾಧನೆಯನ್ನೇ ಹಿರಿಯ ಸಾಧನೆಯಾಗಿ ಕಂಡಿದ್ದಾರೆ. ಇದೆಲ್ಲ ಆತ್ಮೀಯರ 'ಹಿರಿಯತನ'ವಾಗಿದೆ. ಇದೆಲ್ಲಕ್ಕೂ ಮೂಲ ಕಾರಣೀಕರ್ತರು ನಮ್ಮ ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ಹಾಗೂ ಪೂಜ್ಯ ಶಿವಾನಂದ ಗುರೂಜಿಯವರು; ನಮಗೆ ಆತ್ಮೀಯರಾಗಿರುವ ಪೂಜ್ಯ ಶ್ರೀಮನಿಪ್ರ ಗುರುಮಹಾಂತ ಸ್ವಾಮಿಗಳು ಹಾಗೂ ಪೂಜ್ಯ ಶ್ರೀಮಘಚ ಬಸವಲಿಂಗ ಪಟ್ಟದ್ದೇವರು ಎಂದು ವಿನಮ್ರವಾಗಿ ಹೇಳುತ್ತೇನೆ. ಇಳಕಲ್ಲ ಶ್ರೀಮಠದಲ್ಲಿ ಅಭಿನಂದನ ಸಮಾರಂಭ ಏರ್ಪಡಿಸಿ ಎಲ್ಲ ಶರಣರು, ಬಸವಭಕ್ತ ಬಂಧುಗಳು ಆಗಮಿಸಿ ನಮಗೆ ಆಶೀರ್ವಾದ ಮಾಡಿದ್ದು ನಮ್ಮ ಭಾಗ್ಯವಾಗಿದೆ.

**ವಿ. ಸಿದ್ಧರಾಮಣ್ಣ ಶರಣರಿಗೆ ಬಂದಿರುವ ಗೌ॥ ಪ್ರಶಸ್ತಿಗಳು :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರ ಸಾಧನೆ ಗುರುತಿಸಿದ ಸಂಘ-ಸಂಸ್ಥೆಗಳ ಮಹಾನುಭಾವಿಗಳು ಭಕ್ತಿಯಿಂದ ಪ್ರಶಸ್ತಿ ನೀಡಿ ಗೌರವಿಸಿದ್ದಾರೆ-

೧. ಶರಣ ಕಕ್ಕಯ್ಯ ಪ್ರಶಸ್ತಿ – ಕುಮಾರ ಕಕ್ಕಯ್ಯ ಪೋಳ ಪ್ರತಿಷ್ಠಾನ, ವಿಜಯಪುರ.
೨. ಬಸವಗುರು ಕಾರುಣ್ಯ ಪ್ರಶಸ್ತಿ– ಚಿತ್ತರಗಿ ಸಂಸ್ಥಾನಮಠ, ಇಳಕಲ್ಲ.
೩. ಚೆನ್ನಬಸವ ಪ್ರಶಸ್ತಿ – ಹಿರೇಮಠ ಸಂಸ್ಥಾನ, ಭಾಲ್ಕಿ.
೪. ಬಸವತತ್ವಶ್ರೀ ಪ್ರಶಸ್ತಿ – ಬಸವ ಸೆಂಟರ್, ಸೋಲಾಪುರ.
೫. ಬಸವಾನುಭಾವಿ ಪ್ರಶಸ್ತಿ – ಜಗಜ್ಯೋತಿ ಬಸವೇಶ್ವರ ಅನುಭಾವ ಪೀಠ, ರಾಮದುರ್ಗ.
೬. ಅನುಭವ ಮಂಟಪ ಪ್ರಶಸ್ತಿ– ಶಾಂತಿ ವಿದ್ಯಾವರ್ಧಕ ಶಿಕ್ಷಣ ಸಂಸ್ಥೆ, ಭಾಲ್ಕಿ
೭. ಗಣಾಚಾರ ಪ್ರಶಸ್ತಿ – ಅಂಬಿಗ ಚೌಡಯ್ಯ ಪ್ರತಿಷ್ಠಾನ, ಗದಗ-ಬೆಟಗೇರಿ.
೮. ಬಸವ ವಿಭೂಷಣ ಪ್ರಶಸ್ತಿ– ಬಸವ ಸಮಿತಿ, ಬೆಂಗಳೂರು.
೯. ಬಸವಜ್ಯೋತಿ ಪ್ರಶಸ್ತಿ – ಶರಣ ಹಾವಪ್ಪ ಮಾಸ್ತರ ಕೋಟೆ ಪ್ರತಿಷ್ಠಾನ, ಬೀರಗಿ (ಬಿ) ತಾ. ಭಾಲ್ಕಿ
೧೦. ಅಮರಗಣ ಪ್ರಶಸ್ತಿ – ಪ್ರಭುದೇವ ಜ್ಞಾನಕೇಂದ್ರ ಸಂತೆಕಡೂರ-ಶಿವಮೊಗ್ಗ.

**ವಿ. ಸಿದ್ಧರಾಮಣ್ಣ ಶರಣರ ಶತಮಾನೋತ್ಸವ :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರಿಗೆ ನೂರು ವರುಷ ತುಂಬಿದಾಗ (೧೯೨೦-೨೦೨೧) ದಾವಣಗೆರೆ ಬಸವ ಬಳಗ, ಅನುಭವ ಮಂಟಪ-ವಿಶ್ವಬಸವ ಧರ್ಮ ಟ್ರಸ್ಟ, ಬಸವಕಲ್ಯಾಣ, ಬೀದರ ಬಸವಕೇಂದ್ರ, ಭಾಲ್ಕಿಯ ಹಿರೇಮಠ, ಕಲಬುರ್ಗಿಯ ಅನುಭವ ಮಂಟಪ, ಇಳಕಲ್ಲ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನ ಮಠ, ಅಜ್ಜಂಪುರಶೆಟ್ರ ಸೇವಾ ಟ್ರಸ್ಟ, ದಾವಣಗೆರೆ, ಹೊಸಪೇಟೆಯ ಬಸವ ಬಳಗ, ಶರಣ ಹರಳಯ್ಯ ಪೀಠ ಬಸವಕಲ್ಯಾಣ, ಗುರುಬಸವ ಮಹಾಂತ ಟ್ರಸ್ಟ್, ಧಾರವಾಡ, ಶ್ರೀ ಸೋಮಣ್ಣ ನಡಕಟ್ಟಿ ಶರಣರು, ಮೃತ್ಯುಂಜಯ ಸೀಡ್ಸ್ ಕಲಬುರ್ಗಿ ಮುಂತಾದ ಸಂಘಟನೆ-ಮಠಗಳು-ಸಂಸ್ಥೆಗಳು ಶರಣರ ಶತಮಾನೋತ್ಸವ ಆಚರಿಸಿ ಗೌರವಿಸಿದ್ದಾರೆ.

**ಮತ್ತಿಹಳ್ಳಿಯಲ್ಲಿ ಶರಣಮಂಟಪ ನಿರ್ಮಾಣ :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ತಮ್ಮ ಜನ್ಮಸ್ಥಳವಾದ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಮತ್ತಿಹಳ್ಳಿ ಗ್ರಾಮದಲ್ಲಿ ತಮ್ಮ ಯೌವನದ ದಿನಗಳಲ್ಲಿ 'ಶರಣ ಮಂಟಪ' ಎಂಬ ಹೆಸರಿನ ಬೋರ್ಡ ಬರೆಯಿಸಿ ಭಜನೆ-ವಚನ ಸಂಗೀತ ನಡೆಯಿಸಿಕೊಂಡು ಬರುತ್ತಿದ್ದರು. ಇತ್ತೀಚಿಗೆ ೧೦೦ ವರುಷ ತುಂಬಿದ ನಂತರ ಮತ್ತಿಹಳ್ಳಿಯಲ್ಲಿ ಒಂದು 'ಶರಣ ಮಂಟಪ' ನಿರ್ಮಾಣವಾಗಬೇಕು, ತಾವು ಅಂತಿಮ ದಿನಗಳನ್ನು ಅಲ್ಲಿಯೇ ಇದ್ದು ಊರಿನಲ್ಲಿ ಬಸವಭಕ್ತಿ ಬೆಳೆಸಬೇಕು ಎಂಬ ಅಪೇಕ್ಷೆಯನ್ನು ನಮ್ಮ ಮುಂದೆ ವ್ಯಕ್ತಪಡಿಸತೊಡಗಿದ್ದರು. ಮತ್ತಿಹಳ್ಳಿಯ ಭಾರತೀಯ ಬಸವ ದಳದ ಸಂಚಾಲಕರಾಗಿರುವ ಶರಣ ಐ. ಬಸವರಾಜು, ಶರಣರಾದ ಸಣ್ಣಗೌಡ್ರ ಮಂಜಪ್ಪ, ಶಿರಬಿ ಮಂಜಪ್ಪ, ಬಿ. ಕಾಳಾಚಾರಿ, ಸಿ. ಹೊನ್ನಪ್ಪ, ಎಂ. ಅಜ್ಜಣ್ಣ ನ್ಯಾಯವಾದಿಗಳು ಮುಂತಾದ ಹಿರಿಯರು ಹಾಗೂ ಶರಣೆಯರಾದ ಸುಮಂಗಲಾ, ಶಕುಂತಲಾ, ಗಾಯತ್ರಿ, ಜಯಮ್ಮ ಮುಂತಾದ ಅಕ್ಕಂದಿರೊಂದಿಗೆ ಚಿಂತನ ಮಾಡಿದಾಗ, ಎಲ್ಲರೂ 'ಶರಣ ಮಂಟಪ' ನಿರ್ಮಿಸಿಯೇ ಪೂಜ್ಯ ವಿ. ಸಿದ್ಧರಾಮಣ್ಣ ಶರಣರನ್ನು 'ಬಸವ ಕಲ್ಯಾಣ ಅನುಭವ ಮಂಟಪದಿಂದ ಮತ್ತಿಹಳ್ಳಿ ಶರಣಮಂಟಪ'ಕ್ಕೆ ಕರೆದುಕೊಂಡು ಬರಲು ನಿರ್ಧರಿಸಿದರು.

'ಶರಣಮಂಟಪ' ಕಟ್ಟಡ ನಿರ್ಮಾಣಕ್ಕೆ ಹಣ ದಾಸೋಹಗೈಯಲು ಒಂದು ಮನವಿ ಪತ್ರ ಸಿದ್ಧಪಡಿಸಿ, ಪ್ರಕಟಿಸಿ ನಾಡಿನ ಪ್ರಮುಖ ಶರಣ-ಶರಣೆಯರಿಗೆ ಕಳಿಸಲಾಯಿತು. ಗ್ರಾಮ ಪಂಚಾಯತಿಯ ಅಧ್ಯಕ್ಷರು ಹಾಗೂ ಸದಸ್ಯರೂ ಸಂತೋಷದಿಂದ ಸಹಕರಿಸಲು ಒಪ್ಪಿದರು. ಭಾಲ್ಕಿಯ ಶ್ರೀ ಬಸವಲಿಂಗ ಪಟ್ಟದ್ದೇವರು, ಇಳಕಲ್ಲ ಶ್ರೀ ಗುರುಮಹಾಂತ ಸ್ವಾಮಿಗಳು, ಬೀದರದ ಅಲ್ಲಮಪ್ರಭು ನಾವದಗೆರೆ, ರಾಮದುರ್ಗದ ಡಾ॥ ವಾಯ್. ಬಿ. ಕುಲಗೋಡ, ಪ್ರೊ. ಸಿದ್ಧಣ್ಣ ಲಂಗೋಟಿ, ದಾವಣಗೆರೆಯ ಶರಣೆ ಮಂದಾಕಿನಿ ಹೆಚ್.ಎಂ. ಸ್ವಾಮಿ, ಸುಮಂಗಲಾದೇವಿ ಶಿವಾನಂದ ಗುರೂಜಿ, ಧಾರವಾಡದ ಶ್ರೀ ರಮೇಶ ತುಂಬರಗುದ್ದಿ, ದಾವಣಗೆರೆಯ ಅಜ್ಜಂಪುರಶೆಟ್ರ ಸೇವಾ ಟ್ರಸ್ಟ್, ಬಸವಬಳಗದ ಶರಣ-ಶರಣೆಯರು, ಬಸವಕಲ್ಯಾಣದ ಶರಣ ಅಷ್ಟೂರೆ, ಭಾಲ್ಕಿಯ ಮಹಾದೇವಿ ನಾಗರಾಜ, ಗೋಕಾಕದ ಶರಣೆ ಸತ್ಯಮೇಧಾವಿ, ಹಡಗಲಿಯ ಶರಣ ಐಗೋಳ ಚಿದಾನಂದಪ್ಪ, ಬೇವಿನಹಳ್ಳಿಯ ಯು.ಬಿ. ಚಂದ್ರಮ್ಮ, ಬೆಣ್ಣಿಹಳ್ಳಿಯ ಬಿ.ಕೆ. ಪ್ರಕಾಶ, ಹೆಚ್. ಶೀರನಹಳ್ಳಿಯ ಎ.ಜಿ. ಜಲಜಾಕ್ಷಮ್ಮ, ಬೆಂಗಳೂರಿನ ಶರಣೆ ಈಶ್ವರಿ ಬಿನ್ ಸೋಮಶೇಖರ, ಹಡಗಲಿಯ ಡಿ. ನಿರ್ಮಲಾ, ಧಾರವಾಡದ ಮಹಾನಂದಾತಾಯಿ, ಹರಪನಹಳ್ಳಿಯ ಹರಾಳ್ ಅಶೋಕ, ಶರಣೆ ಭೀಮವ್ವ ಹಾಗೂ ಮತ್ತಿಹಳ್ಳಿಯ ಶರಣೆ ಪ್ರಭಾ ಅಜ್ಜಣ್ಣ, ಶರಣೆ ಐನಳ್ಳಿ ಬಸಮ್ಮ, ಶರಣೆ ಅನಸೂಯಮ್ಮ, ಶರಣೆ ಕೊಟ್ರಮ್ಮ, ಶರಣೆ ಚೆನ್ನಮ್ಮ, ಶರಣೆ ಸುಮಂಗಲಾ, ಶರಣೆ ಶಕುಂತಲಾ, ಶರಣೆ ಗಾಯತ್ರಿ, ಶರಣೆ ಗೌರಮ್ಮ, ಶರಣೆ ಶಿರಬಿ ರತ್ನಮ್ಮ, ಶರಣೆ ಕೊಟ್ರಮ್ಮ, ಶರಣೆ ಅಕ್ಕಮಹಾದೇವಿ, ಹರಪನಗಳ್ಳಿಯ ಜಿ. ಅಕ್ಕಮ್ಮ, ಶರಣ ಭರಮಪ್ಪ, ಶರಣ ದುರಗಪ್ಪ ಸಂಗಡಿಗರು, ಶರಣ ಜಿ. ನಾಗಪ್ಪ, ಶರಣ ಸಂತೋಷ, ಶರಣೆ ಲಕ್ಷ್ಮಮ್ಮ ಮಡ್ಡೇರ, ಶರಣೆ ಎಂ.ಜಿ.

ಓಂಪ್ರಕಾಶ್, ಶರಣ ಓಬಳಾಪುರ ಗೋಣಿಬಸಪ್ಪ, ಶರಣ ಬಿ. ನಾಗಪ್ಪ ಮುಂತಾದ ಬಸವಭಕ್ತರು ಉದಾರವಾಗಿ ದೇಣಿಗೆ ನೀಡಿದರು.

ಶರಣಮಂಟಪದ ಕಟ್ಟಿಗೆ ಕೆಲಸ ಮಾಡಿದ ಶರಣರಾದ ಬಿ. ಅಜ್ಜಪ್ಪಾಚಾರಿ, ಕೆ. ಚಂದ್ರಾಚಾರಿ, ಬಿ. ಮೌನೇಶಾಚಾರಿ, ಬಿ. ಮೌನೇನಾಚಾರಿ, ಬಿ. ವೀರೇಶಾಚಾರಿ, ಬಿ. ಕಲ್ಲೇಶಾಚಾರಿ, ಬಿ. ಭದ್ರಾಚಾರಿ ಇವರ ಸೇವೆ ಸ್ತುತ್ಯಾರ್ಹವಾದುದು. ಕಟ್ಟಡದ ಕೆಲಸ ಮಾಡಿದ ಶರಣ ಕನ್ನಾಕಟ್ಟಿ ಮಂಜಪ್ಪ ಹಾಗೂ ಸಂಗಡಿಗರು ಶರಣರ ಕೃಪೆಗೆ ಪಾತ್ರರಾದರು.

**ಬಸವಕಲ್ಯಾಣದ–ಅನುಭಾವ ಮಂಟಪ ಉತ್ಸವದಲ್ಲಿ ಭಾಗಿಯಾದದ್ದು :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ೨೫, ೨೬ ನವೆಂಬರ ೨೦೨೩ ರಂದು ಬಸವಕಲ್ಯಾಣದಲ್ಲಿ ಜರುಗಿದ ೪೪ನೇ ಶರಣಕಮ್ಮಟ–ಅನುಭವ ಮಂಟಪ ಉತ್ಸವದಲ್ಲಿ ತಮ್ಮ ೧೦೩ ನೇ ವಯಸ್ಸಿನಲ್ಲಿ ಭಾಗಿಯಾಗಿ, ಷಟ್‌ಸ್ಥಜಾರೋಹಣ ಗೈದು ಧ್ವಜಗೀತೆ ಹಾಡಿದರು. ಎರಡು ದಿನ ಉತ್ಸವದ ವೇದಿಕೆಯ ಮೇಲಿದ್ದು ಎಲ್ಲ ಕಾರ್ಯಕ್ರಮಗಳನ್ನು ಕಂಡು–ಆನಂದ ಪಟ್ಟರು. ಕೊನೆಯಲ್ಲಿ 'ಬಸವ ಧರ್ಮ ಬಂಧುಗಳೇ ಒಂದಾಗಿರಿ, ಮತ್ತೆ ಶರಣರಾಜ್ಯ ಕಟ್ಟಲೆದ್ದೇಳಿರಿ' ಎಂದು ಕಂಚಿನ ಕಂಠದಿಂದ ಹಾಡಿ, ಬಸವ ಭಕ್ತರನ್ನು ರೋಮಾಂಚನ ಗೊಳಿಸಿದರು.

ಈಗಿನ ಅನುಭವ ಮಂಟಪದ ಪಕ್ಕದಲ್ಲಿ ೧೦೦ ಎಕರೆ ಭೂಮಿಯಲ್ಲಿ ಸರ್ಕಾರ ನಿರ್ಮಿಸುತ್ತಿರುವ, ೭೭೦ ಬೃಹದಾಕಾರದ ಕಲ್ಲಿನ ಕಂಬಗಳ ೭ ಅಂತಸ್ತಿನ ೬೫೦ ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣವಾಗುತ್ತಿರುವ ಬೃಹದಾಕಾರದ ೭೭೦ ಅಮರಗಣಂಗಳ ನೆನಹಿನ 'ಹೊಸ ಅನುಭವ ಮಂಟಪ'ದ ಕಾರ್ಯ ನೋಡಿ ಬಹಳ ಸಂತೋಷಪಟ್ಟರು.

ಪೂಜ್ಯ ಡಾ. ಬಸವಲಿಂಗ ಪಟ್ಟದ್ದೇವರು ಬಸವಕಲ್ಯಾಣದ ಶರಣ ಮಂಟಪದ ವಿಶೇಷ ಕೋಣೆಯಲ್ಲಿ ವಿ. ಸಿದ್ಧರಾಮಣ್ಣ ಶರಣರಿಗೆ ವಸತಿ, ಪೂಜಾ–ಪ್ರಸಾದಕ್ಕೆ ಅನುಕೂಲ ಮಾಡಿ, ಶರಣರ ಸೇವೆಗಾಗಿ ಸಾಧಕ ಶರಣರನ್ನು ನೇಮಿಸಿದರು. ಪ್ರತಿದಿನ ಶರಣ ವಿ. ಸಿದ್ಧರಾಮಣ್ಣನವರ ದರ್ಶನಕ್ಕೆ ಬಸವಭಕ್ತರು ಆಗಮಿಸುತ್ತಿದ್ದರು. ಎಲ್ಲರಿಗೂ ಪ್ರಸಾದ ದಾಸೋಹ ನಡೆಯುತ್ತಿತ್ತು.

**ಲೋಕನಾಯಕ ಶ್ರೀ ಭೀಮಣ್ಣ ಖಂಡ್ರೆ ಅವರ ಶತಮಾನೋತ್ಸವದಲ್ಲಿ ಭಾಗವಹಿಸಿದ್ದು:** ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ೧೯೬೬ ರಿಂದ ಆತ್ಮೀಯರಾಗಿದ್ದ ಪೂಜ್ಯ ಲೋಕನಾಯಕ ಭೀಮಣ್ಣ ಖಂಡ್ರೆಯವರ ಜನ್ಮ ಶತಮಾನೋತ್ಸವದಲ್ಲಿ ದಿನಾಂಕ ೦೨-೧೨-೨೦೨೩ ರಂದು ಭಾಲ್ಕಿಗೆ ಆಗಮಿಸಿ, ವೇದಿಕೆಯ ಮೇಲೆ ಬಂದು ಶುಭ ಕೋರಿದರು. ಕರ್ನಾಟಕದ ಮುಖ್ಯಮಂತ್ರಿಯವರು, ರಾಜ್ಯದ ಹಾಗೂ ರಾಷ್ಟ್ರದ ರಾಜಕೀಯ ನೇತಾರರು, ಶಾಸಕರು, ನೂರಾರು ಜನ ಗುರುಗಳು, ಜಗದ್ಗುರುಗಳು,

ಶರಣರು–ಶರಣೆಯರು, ಲಕ್ಷಾಂತರ ಜನ ಭಕ್ತರು, ಸೇರಿದ್ದ ಕಾರ್ಯಕ್ರಮದಲ್ಲಿ ಶರಣರು ದರ್ಶನವಿತ್ತರು. ಶ್ರೀ ಖಂಡ್ರೆಯವರೂ ಸಂತೋಷಪಟ್ಟರು.

**ಬಸವಕಲ್ಯಾಣ ಅನುಭವ ಮಂಟಪದಿಂದ ಮತ್ತಿಹಳ್ಳಿ ಶರಣ ಮಂಟಪಕ್ಕೆ ಪಯಣ:** ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ದಿನಾಂಕ ೧೪–೦೧–೨೦೨೪ ಸಂಕ್ರಮಣದ ದಿನ ೧೦೪ನೇ ವರುಷಕ್ಕೆ ಪಾದಾರ್ಪಣೆ ಮಾಡಿದರು. ಪೂಜ್ಯರ ಜನ್ಮ ದಿನವನ್ನು ಬಸವ ಕಲ್ಯಾಣದ ಅನುಭವ ಮಂಟಪದಲ್ಲಿ ಕಲ್ಯಾಣ ನಾಡಿನ ಬಸವಭಕ್ತರು ಬಂದು ಆಚರಿಸಿ, ಶರಣರ ದರ್ಶನ–ವಚನಾನುಭವ ಆಲಿಸಿದರು.

ಪೂಜ್ಯ ವಿ. ಸಿದ್ಧರಾಮಣ್ಣ ಶರಣರ ಜನ್ಮ ಗ್ರಾಮ ಮತ್ತಿಹಳ್ಳಿಯಲ್ಲಿ 'ಶರಣ ಮಂಟಪ' ಕಟ್ಟಡವು ಪೂರ್ಣಗೊಂಡ ಸಮಾಚಾರ ತಿಳಿದು, ಶರಣರು ಮತ್ತಿಹಳ್ಳಿಗೆ ಹೊರಡಲು ಪೂಜ್ಯ ಬಸವಲಿಂಗ ಪಟ್ಟದ್ದೇವರ ಹಾಗೂ ಬಸವಕಲ್ಯಾಣದ ಬಸವ ಭಕ್ತರ ಅನುಮತಿ ಕೋರಿದರು. ಬಸವಕಲ್ಯಾಣ ಹರಳಯ್ಯ ಗವಿಯ ಆವರಣದಲ್ಲಿ ಪೂಜ್ಯ ಡಾ. ಗಂಗಾಂಬಿಕಾ ಪಾಟೀಲ ಅಕ್ಕನವರು ಬೀಳ್ಕೊಡುವ ಸಮಾರಂಭ ಏರ್ಪಡಿಸಿದ್ದರು. ಪೂಜ್ಯ ಶ್ರೀ ಬಸವಲಿಂಗ ಪಟ್ಟದ್ದೇವರು, ಕಲ್ಯಾಣ ನಾಡಿನ ಸ್ವಾಮಿಗಳು, ಅಲ್ಲಲ್ಲಿ ಶರಣರ ಗವಿಗಳಲ್ಲಿರುವ ಶರಣೆಯರು, ಬಸವೇಶ್ವರ ದೇವಸ್ಥಾನ ಪಂಚ ಕಮೀಟಿಯವರು ವಿಶ್ವ ಬಸವಧರ್ಮ ಟ್ರಸ್ಟಿನ ಸದಸ್ಯರು, ಬಸವಕಲ್ಯಾಣದ ಹಾಗು ಸುತ್ತಲಿನ ಗ್ರಾಮಗಳ ಬಸವಭಕ್ತರು ಆಗಮಿಸಿದ್ದರು. ಅದೇ ಸಮಯಕ್ಕೆ ಬೀದರ ಜಿಲ್ಲೆಯ ಪೋಲೀಸ ವರಿಷ್ಠಾಧಿಕಾರಿಯಾಗಿದ್ದ ಶ್ರೀ ಚೆನ್ನಬಸವಣ್ಣ ಲಂಗೋಟಿ ಅವರು ಆಗಮಿಸಿ, ಪೂಜ್ಯ ಶರಣರನ್ನು ಗೌರವಿಸಿ, ಶರಣರೊಂದಿಗಿನ ತಮ್ಮ ಬಾಲ್ಯದ ಒಡನಾಟ, ಅನುಭವ ಗಳನ್ನು ಹೇಳಿ, ಶರಣರ ಆಶೀರ್ವಾದ ಪಡೆದರು. ಪೂಜ್ಯರೆಲ್ಲರೂ ವಿ. ಸಿದ್ಧರಾಮಣ್ಣ ಶರಣರ ವ್ಯಕ್ತಿತ್ವ, ಅನುಭವ ಮಂಟಪದ ಆಜೀವ ಸಂಚಾಲಕರಾಗಿ ೫೦ ವರುಷ ಸಲ್ಲಿಸಿದ ಸೇವೆಯನ್ನು ಸ್ಮರಿಸಿಕೊಂಡು ಹೃದಯತುಂಬಿ ಬೀಳ್ಕೊಟ್ಟರು. (ರವಿವಾರ ೨೮–೦೧–೨೦೨೪)

ಪೂಜ್ಯ ಡಾ. ಬಸವಲಿಂಗ ಪಟ್ಟದ್ದೇವರು ತಮ್ಮ ಸ್ವಂತ ಕಾರನ್ನು ಶರಣರ ಮತ್ತಿಹಳ್ಳಿ ಪ್ರಯಾಣಕ್ಕೆ ನೀಡಿ, ಸುರಕ್ಷಿತವಾಗಿ ತಲುಪಿಸಿ ಬರಲು ಶ್ರೀ ಎಂ. ನಾಗರಾಜ ಅವರಿಗೆ ಜತೆಮಾಡಿ ಕಳಿಸಿಕೊಟ್ಟರು. ಸೋಮವಾರ ೨೯–೦೧–೨೦೨೪ ರಂದು ಬೆಳಿಗ್ಗೆ ಸ್ನಾನ ಪೂಜೆ ಪ್ರಸಾದ ಪೂರೈಸಿಕೊಂಡು ಬಸವಕಲ್ಯಾಣದಿಂದ ಹೊರಟು, ಮಧ್ಯಾಹ್ನ ಕಲಬುರ್ಗಿಯಲ್ಲಿ ಶರಣ ಸೋಮಣ್ಣ ನಡಕಟ್ಟಿ ಅವರ ಮನೆಯಲ್ಲಿ ಪೂಜೆ–ಪ್ರಸಾದ ಪೂರೈಸಿಕೊಂಡು, ಸಂಜೆ ಇಳಕಲ್ಲ ಶ್ರೀ ವಿಜಯಮಹಾಂತೇಶ ಮಠಕ್ಕೆ ಬಂದರು. ಅಲ್ಲಿ ಪೂಜ್ಯ ಶ್ರೀ ಗುರುಮಹಾಂತ ಸ್ವಾಮಿಗಳೊಂದಿಗೆ ಪೂಜೆ–ಪ್ರಸಾದ ಮಾಡಿ ರಾತ್ರಿ ವಾಸ್ತವ್ಯ ಮಾಡಿದರು. ಮಂಗಳವಾರ ಬೆಳಿಗ್ಗೆ ಪೂಜ್ಯರೊಂದಿಗೆ ಪೂಜೆ–ಪ್ರಸಾದ ಪೂರೈಸಿ ಬೀಳ್ಕೊಟ್ಟು ಹೊಸಪೇಟೆಯ ಮೂಲಕ ಸಂಜೆ ಮತ್ತಿಹಳ್ಳಿ ಗ್ರಾಮ ತಲುಪಿದರು. ಗ್ರಾಮದ ಎಲ್ಲ ಜನಾಂಗಗಳ ಭಕ್ತರು, ತಾಯಂದಿರು, ಮಕ್ಕಳು ಶರಣರನ್ನು ಸ್ವಾಗತಿಸಿ, ದರ್ಶನ ಪಡೆದರು.

**ಮತ್ತಿಹಳ್ಳಿಯಲ್ಲಿ ಶರಣ ಮಂಟಪ ಉದ್ಘಾಟನೆ** : ಪೂಜ್ಯ ಶರಣರು ಬಂದ ನಂತರ ಅವರೊಂದಿಗೆ ಚರ್ಚಿಸಿ, ಫೋನ್ ಮೂಲಕ ನನ್ನೊಂದಿಗೆ ವಿಚಾರ ವಿನಿಮಯ ಮಾಡಿ ಮಂಗಳವಾರ ದಿನಾಂಕ ೨೦-೦೨-೨೦೨೪ ರಂದು ಶರಣಮಂಟಪ ಉದ್ಘಾಟನಾ ಸಮಾರಂಭ ಆಯೋಜನೆ ಮಾಡಿದರು. ಪೂಜ್ಯ ಶರಣರು ಮುಂಚಿತವಾಗಿಯೇ ಬಂದಿದ್ದರಿಂದ ಆಮಂತ್ರಣ ಪತ್ರಿಕೆ ಸಿದ್ಧಪಡಿಸಿ, ಕಾರ್ಯಕ್ರಮ ಸಂಯೋಜನೆ, ಸಾವಿರಾರು ಜನರಿಗೆ ಪ್ರಸಾದ ದಾಸೋಹ ವ್ಯವಸ್ಥೆ-ಭಕ್ತರೆಲ್ಲ ಒಗ್ಗೂಡಿ ಕಾರ್ಯರೂಪಿಸಿದರು.

ದಿನಾಂಕ ೨೦-೦೨-೨೦೨೪ ರಂದು ಬೆಳಿಗ್ಗೆ ೮:೦೦ ಗಂಟೆಯಿಂದ ಸಂಜೆ ೫:೦೦ ಗಂಟೆವರೆಗೂ ಕಾರ್ಯಕ್ರಮಗಳು-ಪ್ರಸಾದ ದಾಸೋಹ ಜರುಗಿತು. ಬಸವ ಕಲ್ಯಾಣ ಅನುಭವ ಮಂಟಪದ ಅಧ್ಯಕ್ಷರಾಗಿರುವ ಪೂಜ್ಯ ಶ್ರೀಮ.ಘ.ಚ. ಬಸವಲಿಂಗ ಪಟ್ಟದ್ದೇವರು ಹಿರೇಮಠ ಸಂಸ್ಥಾನ ಭಾಲ್ಕಿ ಅವರು ಸಾನಿಧ್ಯ, ಪೂಜ್ಯ ಶ್ರೀಮನಿಪ್ರ ಗುರುಮಹಾಂತ ಸ್ವಾಮಿಗಳು ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ ಇಳಕಲ್ಲ ಅವರು ನೇತೃತ್ವ, ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ದಿವ್ಯ ಸಮ್ಮುಖವಹಿಸಿದ್ದರು. ದಾವಣಗೆರೆ-ಶಿರಮಗೊಂಡನಹಳ್ಳಿಯ ಬಸವಗುರು ತಪೋವನದ ಪೂಜ್ಯ ಶ್ರೀ ಶಿವಾನಂದ ಗುರೂಜಿ ಅವರಿಂದ ಷಟ್‌ಸ್ಥಲ ಧ್ವಜಾರೋಹಣ, ಭಾರತೀಯ ಬಸವದಳ ಮತ್ತಿಹಳ್ಳಿ, ಬಸವಬಳಗ ದಾವಣಗೆರೆ, ಬಸವ ಕಲಾ ಲೋಕದವರಿಂದ ಧ್ವಜಗೀತೆ, ವಚನ ಪ್ರಾರ್ಥನೆ ಜರುಗಿದವು.

ಪೂಜ್ಯರೆಲ್ಲರ ಲಿಂಗಹಸ್ತದಿಂದ 'ಶರಣ ಮಂಟಪ' ಕಟ್ಟಡವು ಉದ್ಘಾಟನೆ ಯಾಯಿತು. ಪೂಜ್ಯ ವಿ. ಸಿದ್ಧರಾಮಣ್ಣ ಶರಣರನ್ನು ಭವ್ಯವಾಗಿ ಅಲಂಕರಿಸಿದ್ದ ವಾಹನದಲ್ಲಿ ಕೂಡಿಸಿ ಶರಣ ಮಂಟಪದಿಂದ ಕಾರ್ಯಕ್ರಮದ ಮಹಾಮಂಟಪದವರೆಗೆ ಮತ್ತಿಹಳ್ಳಿ ಗ್ರಾಮದ ಪ್ರಮುಖ ಬೀದಿಗಳಲ್ಲಿ ಉತ್ಸವದ ಮೂಲಕ ಕರೆತರಲಾಯಿತು. ಎಲ್ಲ ಪೂಜ್ಯರು, ಶರಣರು, ಅತಿಥಿಗಳು ವೇದಿಕೆಮೇಲೆ ಆಸೀನರಾದರು. ಮಹಾಮಂಟಪದಲ್ಲಿ ಸಾವಿರಾರು ಶರಣ-ಶರಣೆಯರು, ಭಕ್ತರು ಕುಳಿತಿದ್ದರು. ಶರಣ ಐ. ಬಸವರಾಜ ಸಂಚಾಲಕರು ಸ್ವಾಗತ ಹಾಗೂ ಪ್ರಾಸ್ತಾವಿಕ ನುಡಿ ಮಾತನಾಡಿದರು. ಗ್ರಾಮದ ಪ್ರಮುಖರು ಪೂಜ್ಯರಿಗೆ, ಅತಿಥಿಗಳಿಗೆ ಮಾಲೆ ಹಾಕಿ ಗ್ರಂಥ ಪುಷ್ಪ ನೀಡಿದರು. ಬಸವಗುರುವಿನ ಭಾವಚಿತ್ರಕ್ಕೆ ಪುಷ್ಪ ಅರ್ಪಿಸಿ ಭಕ್ತಿ ಸಮರ್ಪಿಸಲಾಯಿತು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಪ್ರೊ. ಸಿದ್ಧಣ್ಣ ಲಂಗೋಟಿ ಹಾಗೂ ಡಾ. ಕಲ್ಯಾಣಮ್ಮ ಲಂಗೋಟಿ ಅವರು, ಶರಣ ಪಿ. ರುದ್ರಪ್ಪ, ಅನುಭಾವ ಮಾಡಿ, ವಿ. ಸಿದ್ಧರಾಮಣ್ಣ ಶರಣರ ವ್ಯಕ್ತಿತ್ವ-ಸಾಧನೆ ಕುರಿತು ಮಾತನಾಡಿದರು. ಶರಣ ರಮೇಶ ತುಂಬರಗುದ್ದಿ ದಂಪತಿಗಳು, ಶರಣೆ ಸತ್ಯಮೇಧಾತಾಯಿ, ಡಾ॥ ವಾಯ್.ಬಿ. ಕುಲಗೋಡ, ಶರಣ ವಿಭೂತಿ ಬಸವಾನಂದರು, ಶರಣ ಅಂ.ಹಾ. ಹುಚ್ಚಪ್ಪ ಮೇಷ್ಟ್ರು, ಶರಣ ಎಂ ಅಜ್ಜಣ್ಣ, ಅಲ್ಲಮಪ್ರಭು ನಾವದಗೆರೆ ಮುಂತಾದವರು ಅನುಭಾವದ ನುಡಿಗಳನ್ನಾಡಿದರು.

ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ೧೦೩ ವರುಷ ದಾಟಿ ೧೦೪ಕ್ಕೆ ಪಾದಾರ್ಪಣೆ ಮಾಡಿದ ನಿಮಿತ್ತ ವೇದಿಕೆಯ ಮೇಲಿದ್ದ ಇಳಕಲ್ಲ, ಭಾಲ್ಕಿ, ಬಸವಕಲ್ಯಾಣ ಪೂಜ್ಯರು ಹಾಗೂ ನಾಡಿನ ಎಲ್ಲೆಡೆಯಿಂದ ಆಗಮಿಸಿದ್ದ ಭಕ್ತರು ಗೌರವಪೂರ್ವಕವಾಗಿ ಸನ್ಮಾನ ಮಾಡಿ ಶಾಲು ಹೊದಿಸಿ ಫಲಪುಷ್ಪ, ಭಕ್ತಿ ಕಾಣಿಕೆ ಸಮರ್ಪಿಸಿದರು. ಸಾನಿಧ್ಯವಹಿಸಿದ್ದ ಪೂಜ್ಯರು ಆಶೀರ್ವಚನ ನೀಡಿದರು. ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ನೂರು ವರುಷಗಳ ತಮ್ಮ ಜೀವನದ ಪ್ರಸಂಗ-ಅನುಭವಗಳನ್ನು ಹಂಚಿಕೊಂಡರು. ಶರಣ ಡಿ. ಹಾಲೇಶ ಶಿಕ್ಷಕರು ಶರಣು ಸಮರ್ಪಣೆ ಮಾಡಿದರು. ಶರಣ ಪ್ರಕಾಶ ಅಂಗಡಿ ಹಾಗೂ ಶರಣೆ ಐ. ಜಯಮ್ಮ ಕಾರ್ಯಕ್ರಮ ನಿರೂಪಣೆ ಮಾಡಿದರು.

ಶ್ರೀ ಅಜ್ಜಂಪುರಶೆಟ್ರು ಸೇವಾ ಟ್ರಸ್ಟ್ ದಾವಣಗೆರೆ, ವಚನ ಡೆವಲಪರ್ & ಕನ್‌ಸ್ಟ್ರಕ್ಶನ್ ಬೀದರ ಹಾಗೂ ಕಾಯಕ ಸಂಜೀವನಿ ಫೌಂಡೇಶನ್ (ರಿ) ರಾಮದುರ್ಗ ಇವರು ಸಾವಿರು ಜನ ಭಕ್ತರಿಗೆ ಬಸವ ಮಹಾಪ್ರಸಾದ ದಾಸೋಹ ಮಾಡಿದರು.

**ಮತ್ತಿಹಳ್ಳಿ ಶರಣಮಂಟಪದಲ್ಲಿ ವಿ. ಸಿದ್ಧರಾಮಣ್ಣ ಶರಣರು :** ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ೧೦೩ ವರುಷಗಳಾಗಿದ್ದರೂ ಅವರ ಜೀವನೋತ್ಸಾಹ ಬತ್ತಿರಲಿಲ್ಲ. ಅಂದಾಜು ೬ ತಿಂಗಳ ಕಾಲ ಶರಣಮಂಟಪದಲ್ಲಿ ಪ್ರತಿದಿನ ಸಂಜೆ ಬಸವಗುರು ಪ್ರಾರ್ಥನೆ, ವಚನ ಸಂಗೀತ, ವಚನ ಅನುಭಾವ ನಡೆಸುತ್ತಿದ್ದರು. ದಿನವಿಡೀ ದಾವಣಗೆರೆ, ಹೊಸಪೇಟೆ, ಬಳ್ಳಾರಿ, ಹರಪನಹಳ್ಳಿ, ಜಿಂದಾಲ, ಬಸವಕಲ್ಯಾಣ, ಬೀದರ, ಭಾಲ್ಕಿ, ಧಾರವಾಡ, ಬೆಂಗಳೂರು ಭಾಗಗಳಿಂದ ದರ್ಶನಕ್ಕೆ ಬರುತ್ತಿದ್ದ ಭಕ್ತರೊಂದಿಗೆ ಅನುಭಾವ ಮಾಡುವುದು, ಇಷ್ಟಲಿಂಗ ತತ್ವೋಪದೇಶ ಮಾಡುವುದು. ದೂರ ದೂರದ ಊರುಗಳಲ್ಲಿರುವ ಶರಣರೊಂದಿಗೆ ಮೊಬೈಲ್ ಮೂಲಕ ಮಾತನಾಡಿ, ವಚನ ಹಾಡುವುದು, ವಚನ ಅನುಭವ ಹೇಳುವುದು ಮಾಡುತ್ತಿದ್ದರು. ಈ ಆರು ತಿಂಗಳಿಂದ ದಿನ ಬಿಟ್ಟು ದಿನ, ವಾರಕ್ಕೊಮ್ಮೆಯಾದರೂ ನನಗೆ ಫೋನ್ ಮಾಡಿ, ತಮ್ಮಲ್ಲಿಗೆ ಬಂದಿದ್ದ ಶರಣರೊಂದಿಗೆ ಮಾತನಾಡಿಸುತ್ತಿದ್ದರು. ಬಸವಾದಿ ಶರಣರ ಜಯಂತಿ-ಶರಣೋತ್ಸವ ದಿನಗಳಂದು ಶುಭ ಹಾರೈಸಿ, ತಾವು ಶರಣಮಂಟಪದಲ್ಲಿ ಆಚರಿಸಿ ಅನುಭಾವ ಮಾಡಿದ್ದನ್ನು ಹೇಳುತ್ತಿದ್ದರು.

**ಬಸವ ಮಹಾಬಯಲಿನಲ್ಲಿ ಬಯಲಾದ ಶರಣರು :** ನಾವು ಜುಲೈ ೨೧ ರಿಂದ ಒಂದು ವಾರ ಕಾಶ್ಮೀರದ ಶ್ರೀನಗರದಲ್ಲಿ 'ವಚನಗಳ-ವಿದೇಶಿ ಭಾಷೆಗಳಲ್ಲಿ ಅನುವಾದ ಯೋಜನೆಯ ಕಾರ್ಯಾಗಾರ'ದಲ್ಲಿದ್ದು ಬೆಂಗಳೂರಿಗೆ ೨೭ ರಂದು ರಾತ್ರಿ ಮರಳಿ ಬಂದೆವು. ರವಿವಾರ ಬೆಳಿಗ್ಗೆ ಬೆಂಗಳೂರಿನಲ್ಲಿದ್ದಾಗ ಶರಣರ ಫೋನ ಬಂದಿತು. ಈಗ ಎಂಟು ದಿನಗಳು ನೀವು ಎಲ್ಲಿದ್ದಿರಿ ಶರಣರೆ ಎಂದು ಕೇಳಿದರು. ವಚನಗಳು

ಫ್ರೆಂಚ್, ಜರ್ಮನ್, ಜಪಾನಿ, ನೇಪಾಳಿ, ರಶಿಯನ್, ಸ್ಪೇನ್ ಮುಂತಾದ ವಿದೇಶಿ ಭಾಷೆಗಳಲ್ಲಿ ಅನುವಾದ ನಡೆದಿದೆ ಈ ಕಾರ್ಯಾಗಾರದಲ್ಲಿದ್ದೆವು ಎಂದು ತಿಳಿಸಿದಾಗ– ಅಪ್ಪ ಬಸವಣ್ಣ ಹಾಗೂ ಶರಣರು ಜಗತ್ತನ್ನು ಬೆಳಗುತ್ತಾರೆ ಎಂದು ಸಂತಸಪಟ್ಟು, ವಚನ ಹಾಡಿ ಆನಂದಿಸಿದರು. ಅಗಷ್ಟ ೯ ರಂದು ನಾಗಪಂಚಮಿಯ ದಿನ ಶರಣೆ ಅಕ್ಕನಾಗಮ್ಮ ಜಯಂತಿಯ ಶುಭಾಶಯ ಹೇಳಿ, ವಚನಗಳನ್ನು ಹಾಡಿದರು.

ದಿನಾಂಕ ೧೧–೦೮–೨೦೨೪ ರಾತ್ರಿ ಪೂಜಾ–ಪ್ರಸಾದ ಮಾಡಿ ಮಲಗಿದ್ದಾಗ, ನಿದ್ರಾವಸ್ಥೆಯಲ್ಲಿ ಪಲ್ಲಂಗದ ಮೇಲಿಂದ ಉರುಳಿ ಕೆಳಗೆ ಬಿದ್ದು ಎಚ್ಚರತಪ್ಪಿದ್ದಾರೆ. ಶರಣ ಬಸವರಾಜ ಅವರು ರಾತ್ರಿಯೇ ಕಾರಿನಲ್ಲಿ ದಾವಣಗೆರೆ ಹೈಟೆಕ್ ಆಸ್ಪತ್ರೆಗೆ ಕರೆದೊಯ್ದು ಡಾಕ್ಟರಿಗೆ ತೋರಿಸಿದ್ದಾರೆ. ಆಸ್ಪತ್ರೆಯಲ್ಲಿ ತಜ್ಞ ವೈದ್ಯರು ಚಿಕಿತ್ಸೆ ನೀಡಿದ್ದಾರೆ. **ದಿನಾಂಕ ೧೨–೦೮–೨೦೨೪ ಶ್ರಾವಣ ಸೋಮವಾರ ಬೆಳಿಗ್ಗೆ ೧೧:೦೦ ಗಂಟೆಗೆ** ಸ್ವಲ್ಪ ಪ್ರಜ್ಞೆ ಬಂದು ಕಣ್ಣು ತೆರೆದು ನೋಡಿದ್ದಾರೆ. ಅಲ್ಲಿದ್ದ ಬಸವಬಳಗದ ಶರಣ–ಶರಣೆಯರನ್ನು ನೋಡಿ, ಓಂನಮಃ ಶಿವಾಯ ಬಸವಾ ಎಂದು ಮಂತ್ರ ಹೇಳುತ್ತಾ, ಅವರು ವಚನ ಹಾಡುತ್ತಿರುವಾಗ ಕಣ್ಣುಮುಚ್ಚಿ ಲಿಂಗಧ್ಯಾನಗೈಯುತ್ತ ಮಧ್ಯಾಹ್ನ ೧೨:೩೦ ಗಂಟೆಗೆ ಬಸವ ಮಹಾಬಯಲಿನಲ್ಲಿ ಬಯಲಾಗಿದ್ದಾರೆ.

ಪೂಜ್ಯ ವಿ. ಸಿದ್ಧರಾಮಣ್ಣ ಶರಣರ 'ಲಿಂಗ ಶರೀರ'ವನ್ನು ದಾವಣಗೆರೆ ಬಸವ ಬಳಗದ ಹಾಸ್ಟೆಲ್‌ದಲ್ಲಿ ಅನುಭವ ಮಂಟಪಕ್ಕೊಯ್ದು, ಅಲ್ಲಿ ಇಡೀ ರಾತ್ರಿ ವಚನ ಭಜನೆ ಮಾಡಿ, ಬಸವಭಕ್ತರ ದರ್ಶನಕ್ಕೆ ಇರಿಸಿ, ಮಂಗಳವಾರ ಬೆಳಿಗ್ಗೆ ೧೦:೦೦ ಗಂಟೆಗೆ ಪುಷ್ಪನಮನ ಬಸವಗುರು ಮಂಗಲ ಮಾಡಿ, ಲಿಂಗಶರೀರವನ್ನು ಮತ್ತಿಹಳ್ಳಿ ಗ್ರಾಮಕ್ಕೆ ತಂದು, ಶರಣಮಂಟಪದಲ್ಲಿ ಭಕ್ತರಿಗೆ ದರ್ಶನಕ್ಕೆ ಅವಕಾಶಮಾಡಿ, ಸಂಜೆ ಊರಲ್ಲಿ ಉತ್ಸವ ಮಾಡಿ, ಶರಣರ ಹೊಲದಲ್ಲಿ ಸಾಯಂಕಾಲ ೫:೩೦ ಗಂಟೆಗೆ ಭಾಲ್ಕಿ, ಇಳಕಲ್ಲ, ಬೀದರ, ಕೂಡಲಸಂಗಮ, ದಾವಣಗೆರೆ ಪೂಜ್ಯರ, ಶರಣ–ಶರಣೆಯರ ಸಮ್ಮುಖದಲ್ಲಿ ಬಸವಧರ್ಮ–ತತ್ವಗಳ ಪ್ರಕಾರ ವಿ. ಸಿದ್ಧರಾಮಣ್ಣ ಶರಣರ ಅಂತಿಮ ಸಂಸ್ಕಾರವನ್ನು ಪುಷ್ಪವೃಷ್ಟಿ–ಬಸವ ವಚನ ಗುರುಮಂಗಲದೊಂದಿಗೆ ನೆರವೇರಿಸಲಾಯಿತು.

ಒಂದು ಶತಮಾನ ಕಾಲ ಬಸವತತ್ವ ಪ್ರಸಾರಗೈದು, **ಕಲ್ಯಾಣದ ಶರಣ ವಿ. ಸಿದ್ಧರಾಮಣ್ಣ** ಎಂದೇ ಪ್ರಖ್ಯಾತರಾಗಿ ಬಸವ ಮಹಾಬಯಲಲ್ಲಿ ಬಯಲಾದ ಶರಣರು **'ಯುಗ ಪುರುಷ, ಯುಗದ ಉತ್ಸಾಹ'**ವೇ ಆಗಿ ಬಸವಭಕ್ತರ ಹೃದಯದಲ್ಲಿ ಶರಣ ಶಕ್ತಿಯಾಗಿ ಪ್ರೇರಣೆ ನೀಡುವ ಮಹಾನ್ ಶರಣರಾಗಿ ಉಳಿದಿದ್ದಾರೆ.

ಉಪಮಿಸಬಾರದ ಉಪಮಾತೀತರು
ಕಾಲಕರ್ಮರಹಿತರು ಭವವಿರಹಿತರು
ಕೂಡಲಸಂಗಮದೇವಾ, ನಿಮ್ಮ ಶರಣರು.

## ೨. ಮಹಾಂತ–ಭಾವಗೀತೆ

ಮಹಾಂತ ಬರುವರೆಂದು ನಾನು
ಮನದಿ ತಪವ ಮಾಡುವೆ,
ಭಕ್ತಿಭಾವದಿಂದ ನಿಮ್ಮ
ನಾಮಸ್ಮರಣೆ ಮಾಡುವೆ ||ಪ||
ನಿತ್ಯ ಪೂಜೆಯಲ್ಲಿ ನಾನು
ನಿಮ್ಮ ಧ್ಯಾನ ಮಾಡುವೆ,
ನಿಮ್ಮ ಧ್ಯಾನದಲ್ಲಿ ನಾನು
ಮಧುರ ಗಾನ ಪಾಡುವೆ. ||೧||
ಭಕ್ತಿ ಪೂಜೆಯಲ್ಲಿ ನಾನು
ಭಕ್ತಿ ಪಥವ ಬೇಡುವೆ,
ದಿವ್ಯ ಪಾದದಲ್ಲಿ ನಾನು
ಜಲದ ಧಾರೆಯಾಗುವೆ. ||೨||
ಭಾವ ಪೂಜೆಯಲ್ಲಿ ನಾನು
ನಿರ್ಭಾವದಿ ಬೇಡುವೆ,
ಪರಮಪಾದದಲ್ಲಿ ನಾನು
ಪವಿತ್ರ ಭಸ್ಮ ವಾಗುವೆ. ||೩||
ನಿಷ್ಠೆ ಪೂಜೆಯಲ್ಲಿ ನಾನು
ನಿಷ್ಠೆಯಿಂದ ಬೇಡುವೆ,
ಪೂಜ್ಯ ಪಾದದಲ್ಲಿ ನಾನು
ಬಿಲ್ವ ಪತ್ರೆಯಾಗುವೆ. ||೪||
ಪಾದಪೂಜೆಯಲ್ಲಿ ನಾನು
ನಿಮ್ಮ ಕರುಣೆ ಬೇಡುವೆ,
ಶರಣ ಪಾದದಲ್ಲಿ ನಾನು
ಬೆಳಕ ಕಿರಣ ಕಾಣುವೆ. ||೫||
ಮುಕ್ತ ಪೂಜೆಯಲ್ಲಿ ನಾನು
ಮುಕ್ತಿ ಪದವಿ ಬೇಡುವೆ,
ಮಹಾಂತ ನಿಮ್ಮ ಪಾದದಡಿಯ
ಪಾದುಕೆ ನಾನಾಗುವೆ. ||೬||

ರಚನೆ : ಕೋನಸಾಗರ ಭಾಗಣ್ಣನವರ ವೀರಭದ್ರಪ್ಪ
ನಿವೃತ್ತ ಉಪನ್ಯಾಸಕರು, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ.

## ೩. ವರದಿ ವಿಭಾಗ

### ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ, ಇಳಕಲ್ಲ
### ಶ್ರಾವಣ–ಶರಣ ಸಂಸ್ಕೃತಿ ಮಹೋತ್ಸವ

**ಇಳಕಲ್ಲ :** ಪರಮ ದಾಸೋಹಿ ಚಿತ್ತರಗಿ–ಇಳಕಲ್ಲ ಶ್ರೀ ವಿಜಯಮಹಾಂತ ಶಿವಯೋಗಿಗಳವರ ಮತ್ತು ಡಾ. ಮಹಾಂತ ಶಿವಯೋಗಿಗಳವರ ಶರಣ ಸಂಸ್ಕೃತಿ ಮಹೋತ್ಸವವು ಶ್ರಾವಣ ತಿಂಗಳು ಸೋಮವಾರ ದಿನಾಂಕ ೫–೮–೨೦೨೪ ರಿಂದ ಮಂಗಳವಾರ ದಿನಾಂಕ ೩–೯–೨೦೨೪ರ ವರೆಗೆ ಚಿತ್ತರಗಿ ಸಂಸ್ಥಾನಮಠ ಇಳಕಲ್ಲದಲ್ಲಿ ಅರ್ಥಪೂರ್ಣ–ವಾಗಿ ವೈಭವದಿಂದ ಜರುಗಿತು.

ಪೂಜ್ಯ ಶ್ರೀಮನಿಪ್ರ ಗುರುಮಹಾಂತ ಸ್ವಾಮಿಗಳವರ ಸಮ್ಮುಖದಲ್ಲಿ–ಪ್ರತಿದಿನ ಬೆಳಿಗ್ಗೆ ೮:೦೦ ಗಂಟೆಗೆ ಪೂಜ್ಯ ಶ್ರೀ ಬಸವನವಲಿಂಗ ಶರಣರು ಅಲ್ಲಮಪ್ರಭು ಜ್ಞಾನ ಮಂಟಪ, ಸಂತೆಕಡೂರು ಅವರಿಂದ 'ಬಸವಾದಿ ಶರಣರ ತತ್ವಜ್ಞಾನ' ಕುರಿತು ಪ್ರವಚನ ಹಾಗೂ ಪ್ರತಿದಿನ ಸಂಜೆ ೭:೦೦ ಗಂಟೆಗೆ ಪೂಜ್ಯಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಅಲ್ಲಮಪ್ರಭು ಆಶ್ರಮ ಜನವಾಡ ಅವರಿಂದ 'ಬಸವ ತತ್ತ್ವ–ಅನುಭಾವ' ಕುರಿತು ಪ್ರವಚನ ಜರುಗಿದವು. ಇಳಕಲ್ಲದ ಶ್ರೀ ಗಣೇಶ ರಾಯಬಾಗಿ ಹಾಗೂ ಸಂಗಡಿಗರು, ಕು. ಶಕೀಲ ನಾಗನೂರ, ಶ್ರೀ ಕೃಷ್ಣ ಬೆನ್ನೂರ, ಶ್ರೀ ಗುರುಪ್ರಸಾದ ಓದಾ, ಶಿವರಂಜನಿ ಕಲಾ ತಂಡದವರಿಂದ ವಚನ ಸಂಗೀತ, ಶ್ರೀ ನವಲಿಂಗ ಪಾಟೀಲ, ಶ್ರೀ ಶರಣಪ್ಪ ಪತ್ತಾರ, ಶ್ರೀ ಜಗನ್ನಾಥ ಕೆಂಧೂಳಿ, ಶ್ರೀ ಪ್ರಕಾಶ ಪತ್ತಾರ ಇವರಿಂದ ತಬಲಾ ವಾದನ; ಶ್ರೀ ಬಸಪ್ಪ ಭಜಂತ್ರಿ ಹಾಗೂ ಪರಿವಾರ, ಅಮರಾವತಿ ಅವರಿಂದ ಶಹನಾಯಿವಾದನ ಜರುಗಿದವು.

ಒಂದು ತಿಂಗಳಕಾಲ ಜರುಗಿದ ಶರಣ ಸಂಸ್ಕೃತಿ ಮಹೋತ್ಸವದಲ್ಲಿ– ಶರಣೆ ಅಕ್ಕನಾಗಮ್ಮ ಜಯಂತಿಯಂದು ಹಾಲು ಕುಡಿವ ಹಬ್ಬ, ರಸಪ್ರಶ್ನೆ ಕಾರ್ಯಕ್ರಮ, ಜಾನಪದ ಗೋಷ್ಠಿ, ನಿಸರ್ಗ ಚಿಕಿತ್ಸಾ ಗೋಷ್ಠಿ, ಅನುಭವ ಮಂಟಪ ಅನುಭಾವ ಗೋಷ್ಠಿ, ವಚನಸಂಗೀತ ಗೋಷ್ಠಿ, ಒಣಬೇಸಾಯ ಪ್ರಶಸ್ತಿ, ಲಿಂಗವಂತ ಧರ್ಮಗ್ರಂಥ ಬಹುಮಾನ, ಲಿಂಗವಂತ ಕಾಯಕ ಸಂಜೀವಿನಿ ವಚನ ಸಿದ್ಧಾಂತ ವಿಶೇಷ ಉಪನ್ಯಾಸ ಮಾಲೆ, ಮಕ್ಕಳ ಗೋಷ್ಠಿ, ಮಹಿಳಾ ಗೋಷ್ಠಿ, ವಿಶ್ವ ಬಸವಧರ್ಮ ಸಮಾವೇಶ, ಸಾಮೂಹಿಕ ಕಲ್ಯಾಣ ಮಹೋತ್ಸವ, ಧರ್ಮಗ್ರಂಥ ವಚನ ಸಾಹಿತ್ಯದ ಮಹಾ ರಥೋತ್ಸವ, ವಚನ ತಾಡೋಲೆ ಕಟ್ಟಿನ ಪಲ್ಲಕ್ಕಿ ಮಹೋತ್ಸವ, ವಚನಯಾತ್ರೆ ಮುಂತಾದ ವಿಶೇಷ ಸಮಾರಂಭಗಳೂ ಜರುಗಿದವು.

ಒಂದು ತಿಂಗಳ ಕಾಲ ಜರುಗಿದ ಶರಣ ಸಂಸ್ಕೃತಿ ಮಹೋತ್ಸವ ಕಾರ್ಯಕ್ರಮಗಳಲ್ಲಿ ಪೂಜ್ಯರಾದ ಗದಗ, ಹುಬ್ಬಳ್ಳಿ, ನಿಡಸೋಸಿ, ಕೂಡಲಸಂಗಮ, ಗುಳೇದಗುಡ್ಡ, ಜಗದ್ಗುರುಗಳು, ಪೂಜ್ಯರಾದ ತಿಕೋಟಾ, ಜನವಾಡ, ಧಾರವಾಡ, ಬೆಂಗಳೂರು, ಶಿರೂರ, ಸತ್ತಿ, ಲಿಂಗಸಗೂರು, ಸಿದ್ಧಯ್ಯಕೋಟೆ, ಸಂತೆಕೆಲ್ಲೂರ, ತಂಗಡಗಿ, ಮರೆಗುದ್ದಿ, ಪಿ.ಎಂ. ಬುದ್ನಿ, ಹಾಲಕೇರಿ, ಹೊಸಪೇಟೆ, ಅಮೀನಗಡ, ಕಮತಗಿ, ಮನಗೂಳಿ, ಭಾಲ್ಕಿ, ಬೆಳಗಾವಿ–ನಾಗನೂರ, ಹುಲಸೂರು, ಪಾಂಡೋಮಟ್ಟಿ, ಹರನಾಳ, ಬೆಳ್ಳೇರಿ,

ಜಮಖಂಡಿ ಮುಂತಾದ ಮಠಗಳ ಶ್ರೀಗಳವರು ಸಾನಿಧ್ಯ, ನೇತೃತ್ವ, ಅಧ್ಯಕ್ಷತೆ, ಉಪಸ್ಥಿತಿ ವಹಿಸಿ ಅನುಭಾವ ಕರುಣಿಸಿದರು.

ನಮ್ಮ ನಾಡಿನ ಹೆಸರಾಂತ ಸಂಗೀತ ವಿದ್ವಾನರು, ವಿದೂಷಿಯರು ವಚನ ಸಂಗೀತ ನೀಡಿದರು. ಅನೇಕ ಅನುಭಾವಿ ಶರಣರು, ಶರಣೆಯರು, ಸಾಹಿತಿಗಳು ಅನುಭಾವ ನೀಡಿದರು. ನಾಡಿನ ರಾಜಕೀಯ ಮುತ್ಸದ್ಧಿಗಳು ಹಾಗೂ ಇಸ್ಲಾಂ ಧರ್ಮದ ಪೂಜ್ಯ ಗುರುಗಳು ಹಾಗೂ ಭಕ್ತರೂ ಭಾಗವಹಿಸಿದ್ದರು. ಶಾಲಾ-ಕಾಲೇಜುಗಳ ವಿದ್ಯಾರ್ಥಿ-ವಿದ್ಯಾರ್ಥಿನಿಯರು ವಚನ ನೃತ್ಯ ರೂಪಕ ಮಾಡಿದರು.

## ೨೦೨೩-೨೪ರ ಲಿಂಗವಂತ ಧರ್ಮಗ್ರಂಥ ಬಹುಮಾನ-ಪುರಸ್ಕೃತರು

೧. ಶರಣ ಜೀವನ ದರ್ಶನ – ಶ್ರೀ ರಾಜು ಜುಬರೆ, ಭಾಲ್ಕಿ
೨. ಮರುಳಶಂಕರ ದೇವರು – ಡಾ. ದಯಾನಂದ ನೂಲ್ವಿ, ಚಿಕ್ಕೋಡಿ.
೩. ವಚನ ದರ್ಶನ – ಡಾ. ವೀರಣ್ಣ ದಂಡೆ, ಕಲಬುರ್ಗಿ.
೪. ಜಗಜ್ಯೋತಿ – ಶ್ರೀ ಬಸವನವಲಿಂಗ ಶರಣರು, ಸಂತೆಕಡೂರ.
೫. ಲಿಂಗಾಯತ-ಲಿಂಗ ಸಮಾನತೆ – ಡಾ. ಟಿ. ಆರ್. ಚಂದ್ರಶೇಖರ, ಬೆಂಗಳೂರು
೬. ಲಿಂಗಾಯತ ಧರ್ಮ – ಡಾ. ಬಸವರಾಜ ಸಬರದ, ಕಲಬುರ್ಗಿ.
೭. ಕಂದಾಚಾರದಿಂದ ಲಿಂಗಾಚಾರದೆಡೆಗೆ – ಶ್ರೀ ಶಿವಣ್ಣ ಶರಣ್ಣವರ, ಧಾರವಾಡ.

**ಮಹಾರಥೋತ್ಸವ :** ಶ್ರೀ ವಿಜಯಮಹಾಂತ ಶಿವಯೋಗಿಗಳ ಕತೃಗದ್ದುಗೆಯ ತಪೋಭೂಮಿಯಲ್ಲಿ ಬಸವಾದಿ ಶರಣರ ವಚನ ಗ್ರಂಥಗಳ ಮಹಾ ರಥೋತ್ಸವವು ಸೋಮವಾರ ದಿನಾಂಕ ೨-೯-೨೦೨೪ ರಂದು ಸಂಜೆ ೫:೦೦ ಗಂಟೆಗೆ ವೈಭವ ಪೂರ್ಣವಾಗಿ ಜರುಗಿತು.

**ಪಲ್ಲಕ್ಕಿ ಮಹೋತ್ಸವವು :** ಧರ್ಮಗ್ರಂಥ ವಚನಸಾಹಿತ್ಯದ ತಾಡೋಲೆ ಕಟ್ಟಿನ ಅಡ್ಡಪಲ್ಲಕ್ಕಿ ಮಹೋತ್ಸವವು ಮಂಗಳವಾರ ಮಧ್ಯಾಹ್ನ ೩:೦೦ ಗಂಟೆಗೆ ಆರಂಭವಾಗಿ ಬುಧವಾರ ರಾತ್ರಿವರೆಗೆ ಇಳಕಲ್ಲ ಪಟ್ಟಣದ ಓಣಿಗಳಲ್ಲಿ ಪೂಜ್ಯರ, ಭಕ್ತರ ಪಾದಯಾತ್ರೆಯೊಂದಿಗೆ ವಿಜೃಂಭಣೆಯೊಂದಿಗೆ ಜರುಗಿ ಸರ್ವಕಾಲಿಕ ದಾಖಲೆ ನಿರ್ಮಿಸಿತು.

ಶರಣ ಸಂಸ್ಕೃತಿ ಮಹೋತ್ಸವದ ಕಲಾ ಬಳಗಗಳು- ಬುಳ್ಳಾಪುರದ ವೀರಗಾಸೆ, ಜಹಗೀರ ಗುಡದೂರ, ಶಿರಬಡಗಿ, ಹೊಸುರು, ವಕ್ಕಂದುರ್ಗ, ರಾಂಪೂರ ಭಕ್ರತ ಭಜನಾ ಮೇಳಗಳು, ಹುನಗುಂದ, ವೀರಾಪುರ, ಬಾದವಾಡಗಿ ಗ್ರಾಮಗಳ ಡೊಳ್ಳಿನ ಮೇಳ, ಸಮಾಳವಾದ್ಯಗಳ ಸೇವೆ, ಸೊನ್ನದ ಹಲಗೆ ಮಜಲಿನ ವೈಭವ, ಇಳಕಲ್ಲ ಶ್ರೀ ನಿಂಗಪ್ಪ ಬೆಳಗಲ್ಲ ಇವರ ಜೋಡು ಕುದುರೆಗಳ ಮನಮೋಹಕ ಕುಣಿತ ಜರುಗಿದವು.

ಇಳಕಲ್ಲ ಕಿಲ್ಲಾದ ಸಮಸ್ತ ಸದ್ಭಕ್ತರು ಹಾಗೂ ಮಾರುತಿ ತರುಣ ಸಂಘದವರಿಂದ ಉತ್ಸವದೊಂದಿಗೆ ರಥದ ಹಗ್ಗದ ಸೇವೆ-ಜರುಗಿತು.

ಇಳಕಲ್ಲದ ಶರಣಸಂಸ್ಕೃತಿ ಮಹೋತ್ಸವ ಸಮಿತಿ, ಶ್ರೀ ವಿಜಯಮಹಾಂತೇಶ ತರುಣ ಸಂಘ, ಬಸವ ಕೇಂದ್ರ, ಅಕ್ಕನಬಳಗ ಹಾಗೂ ಶ್ರೀಮಠದ ಎಲ್ಲ ೭೦ ಶಾಖಾ ಮಠಗಳ ಸಮಸ್ತ ಭಕ್ತರು ಶರಣಸಂಸ್ಕೃತಿ ಮಹೋತ್ಸವದ ಯಶಸ್ವಿಗಾಗಿ ಹಗಲಿರುಳು ಸೇವೆಗೈದರು. ಲಕ್ಷಾಂತರ ಭಕ್ತರು ನಿರಂತರ ಮಹಾಪ್ರಸಾದ ಸ್ವೀಕರಿಸಿದರು. ಶರಣರಾದ

ಶ್ರೀ ಸಂಗಣ್ಣ ಗದ್ದಿ ಶಿಕ್ಷಕರು, ಶ್ರೀ ಪ್ರವೀಣ ಮುದಗಲ್ಲ ಹಾಗೂ ಶ್ರೀ ಮಲ್ಲಯ್ಯ ಗಣಾಚಾರಿ ನಿವೃತ್ತ ಶಿಕ್ಷಕರು ಕಾರ್ಯಕ್ರಮಗಳ ನಿರೂಪಣೆ ಮಾಡಿದರು.

**ಹುನಗುಂದ ಶ್ರೀಮಠದಲ್ಲಿ 'ವಚನ ದರ್ಶನ' ಪ್ರವಚನ :**

**ಹುನಗುಂದ :** ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ ಹುನಗುಂದದಲ್ಲಿ ಶ್ರಾವಣ ತಿಂಗಳಲ್ಲಿ ಜರುಗಿದ ವಚನ ದರ್ಶನ ಪ್ರವಚನ ಮಂಗಲ ಸಮಾರಂಭವು ಜರುಗಿತು. ಪೂಜ್ಯಶ್ರೀ ಗುರುಮಹಾಂತ ಸ್ವಾಮಿಗಳು ಹಾಗೂ ಸಂತೆಕಡೂರು, ಜನವಾಡ, ಲಿಂಗಸಗೂರು, ಮನಗೂಳಿ, ಗುಳೇದಗುಡ್ಡ, ಶಿರೂರ ಶ್ರೀಗಳು ಅನುಭಾವ ನೀಡಿದರು. ಸನ್ಮಾನ್ಯ ಶಾಸಕರಾದ ಶ್ರೀ ವಿಜಯಾನಂದ ಕಾಶಪ್ಪನವರ ಮುಖ್ಯ ಅತಿಥಿಗಳಾಗಿದ್ದರು. ಪುರಸಭೆ ಅಧ್ಯಕ್ಷೆ ಶರಣೆ ಭಾಗ್ಯಶ್ರೀ ರೇವಡಿ, ಉಪಾಧ್ಯಕ್ಷೆ ಶರಣೆ ರಾಜೇಶ್ವರಿ ಬದಾಮಿ, ಶ್ರೀ ಶಿವಪ್ಪ ನಾಗೂರ, ಶ್ರೀ ಕಿಡಿಯಪ್ಪ ಹೂಲಗೇರಿ, ಶ್ರೀ ಸಂಗಣ್ಣ ಎಮ್ಮಿ, ಶ್ರೀ ಎಸ್. ಆರ್. ಗೋಲಗುಂಡ, ಶ್ರೀ ಅಶೋಕ ಭಾವಿಕಟ್ಟಿ, ಶ್ರೀ ಸದಾಶಿವ ಬೆಣಗಿ ಮುಂತಾದ ಭಕ್ತರು ಉಪಸ್ಥಿತಿರಿದ್ದರು.

**ಇಳಕಲ್ಲದಲ್ಲಿ ವ್ಯಸನಮುಕ್ತ ದಿನಾಚರಣೆ :** ತಾಲೂಕ ಆಡಳಿತದಿಂದ ತಹಶೀಲ್ದಾರ ಕಛೇರಿಯಲ್ಲಿ ಪೂಜ್ಯ ಡಾ. ಮಹಾಂತ ಶಿವಯೋಗಿಗಳ ಜನ್ಮದಿನವನ್ನು ವ್ಯಸನಮುಕ್ತ ದಿನಾಚರಣೆಯಾಗಿ ಆಚರಿಸಲಾಯಿತು. ಪೂಜ್ಯಶ್ರೀ ಗುರುಮಹಾಂತ ಶ್ರೀಗಳು ಸಾನಿಧ್ಯ, ಸನ್ಮಾನ್ಯ ಶಾಸಕರಾದ ಶ್ರೀ ವಿಜಯಾನಂದ ಕಾಶಪ್ಪನವರ ಉದ್ಘಾಟಕರಾಗಿದ್ದರು. ಶ್ರೀ ಸಂಗಣ್ಣ ಗದ್ದಿ ಅನುಭಾವ ನೀಡಿದರು. ಶ್ರೀ ಸತೀಶ ಕೂಡಲಗಿ ತಹಶೀಲ್ದಾರ ಅಧ್ಯಕ್ಷತೆವಹಿಸಿದ್ದರು. ಶ್ರೀ ಈಶ್ವರ ಗಡ್ಡಿ ಉಪತಹಶೀಲ್ದಾರ ಸ್ವಾಗತಿಸಿದರು. ತಾಲೂಕ ಪಂಚಾಯತಿ ಅಧಿಕಾರಿ ಶ್ರೀ ಮುರಳೀಧರರಾವ್ ದೇಶಪಾಂಡೆ ಶರಣು ಸಲ್ಲಿಸಿದರು. ಶ್ರೀ ಶಂಕರ ಲಮಾಣಿ ಕಾರ್ಯಕ್ರಮ ನಿರೂಪಣೆ ಮಾಡಿದರು.

**ಇಳಕಲ್ಲ ಶ್ರೀಮಠದಲ್ಲಿ-ವ್ಯಸನಮುಕ್ತ ದಿನಾಚರಣೆ :** ಪೂಜ್ಯ ಡಾ. ಮಹಾಂತ ಶಿವಯೋಗಿಗಳವರ ೯೪ನೇ ಜನ್ಮದಿನವನ್ನು ವ್ಯಸನಮುಕ್ತ ದಿನಾಚರಣೆಯಾಗಿ ಶ್ರೀಮಠದಲ್ಲಿ ಆಚರಿಸಲಾಯಿತು. ಪೂಜ್ಯಶ್ರೀ ಗುರು ಮಹಾಂತ ಸ್ವಾಮಿಗಳು ಸಾನಿಧ್ಯ, ಪೂಜ್ಯ ಉಚ್ಚನ್ಯಾಯಾಲಯದ ವಿಶ್ರಾಂತ ನ್ಯಾಯಮೂರ್ತಿ ಶ್ರೀ ಶಿವರಾಜ ಪಾಟೀಲ ಮುಖ್ಯಅತಿಥಿಗಳು, ೯೪ ಜನ ಶಿಕ್ಷಕ ದಂಪತಿಗಳಿಗೆ ಗೌರವ ಸನ್ಮಾನ ಹಾಗೂ ಪ್ರತಿಜ್ಞಾವಿಧಿ ನೆರವೇರಿಸಲಾಯಿತು.

**ಪೂಜ್ಯ ಶ್ರೀ ಗುರುಮಹಾಂತ ಸ್ವಾಮಿಗಳ ಅಭಿನಂದನಾ ಸಮಾರಂಭ : ಇಳಕಲ್ಲ:** ಪೂಜ್ಯ ಶ್ರೀಮನಿಪ್ರ ಗುರುಮಹಾಂತ ಸ್ವಾಮಿಗಳು ಚಿತ್ತರಗಿ ಸಂಸ್ಥಾನಮಠ ಇಳಕಲ್ಲಕ್ಕೆ ೨೦ನೇ ಪೀಠಾಧಿಪತಿಯಾಗಿ (೧೨-೯-೨೦೦೩) ಬಂದು ೨೦ ವರುಷಗಳು ಪೂರ್ಣಗೊಂಡ ಪ್ರಯುಕ್ತ ಶ್ರೀ ವಿಜಯಮಹಾಂತೇಶ ವಿದ್ಯಾವರ್ಧಕ ಸಂಘದ ಚೇರಮನ್ ಶ್ರೀ ಶಿವರುದ್ರಪ್ಪ ಗೊಂಗಡಶೆಟ್ಟಿ ಹಾಗೂ ಭಕ್ತರು ಪೂಜ್ಯಶ್ರೀಗಳವರಿಗೆ ದಿನಾಂಕ ೧೨-೯-೨೦೨೪ ರಂದು ಭಕ್ತಿಪೂರ್ವಕ ಗೌರವ-ಅಭಿನಂದನೆ ಸಲ್ಲಿಸಿದರು. ಶರಣರಾದ ಶ್ರೀ ಗುರಣ್ಣ ಮರಟದ, ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಜನವಾಡ, ಡಾ. ಮಹಾಂತ ಬಸವಶ್ರೀಗಳು, ಶ್ರೀ ಸಂಗಣ್ಣ ಗದ್ದಿ, ಶ್ರೀ ಪ್ರವೀಣ ಮುದಗಲ್ಲ, ಶ್ರೀ ಶರಣಪ್ಪ ಅಕ್ಕಿ, ಹಾಗೂ ಶ್ರೀಮಠದ ಹಿರಿಯ ಭಕ್ತರು ಉಪಸ್ಥಿತರಿದ್ದರು.

✠✠✠

## ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ, ಇಳಕಲ್ಲ
## ಶರಣಸಂಸ್ಕೃತಿ ಮಹೋತ್ಸವದಲ್ಲಿ ಬಸವ ಮಹಾ ಪ್ರಸಾದ-ದಾಸೋಹ



ಪೂಜ್ಯರಾದ ಇಳಕಲ್ಲ, ಶಿರೂರ, ಪಾಂಡೋಮಟ್ಟಿ, ಸಿದ್ಧಯ್ಯನಕೋಟೆ, ಲಿಂಗಸಗೂರು, ಜಮಖಂಡಿ, ಮನಗೂಳಿ, ಸತ್ತಿ ಶ್ರೀಗಳವರು ಹಾಗೂ ಮಾನ್ಯಶ್ರೀ ವಿಜಯಾನಂದ ಕಾಶಪ್ಪನವರ ಶಾಸಕರು ಹಾಗೂ ಶ್ರೀಮಠದ ಸದ್ಭಕ್ತರು.

## ಪೂಜ್ಯಶ್ರೀ ವಿಜಯಮಹಾಂತರ ತಪೋಭೂಮಿ-ಇಳಕಲ್ಲದಲ್ಲಿ
## ೨೧ ಜೋಡಿ-ಸಾಮೂಹಿಕ ಕಲ್ಯಾಣ ಮಹೋತ್ಸವ (೨-೯-೨೦೨೪)



ಪೂಜ್ಯ ಶ್ರೀಮನಿಪ್ರ ಗುರುಮಹಾಂತ ಸ್ವಾಮಿಗಳು ನೂತನ ದಂಪತಿಗಳಿಗೆ ವಚನ ಮಾಂಗಲ್ಯ ಹಾಗೂ ವಚನ ಪ್ರತಿಜ್ಞೆ ಮಾಡಿಸುತ್ತಿರುವುದು.

Basava Belagu (Kannada) Quarterly Vol : 38 Issue-4 Oct-Nov-Dec 2024 Reg. No. 022762/23/6/AL/86

## ಚಿತ್ತರಗಿ ಸಂಸ್ಥಾನಮಠ, ಇಳಕಲ್ಲದಲ್ಲಿ
## ಧರ್ಮಗ್ರಂಥ ವಚನ ಸಾಹಿತ್ಯದ ಅಡ್ಡಪಲ್ಲಕ್ಕಿ ಮಹೋತ್ಸವ (೩-೯-೨೦೨೪)



ಲಿಂಗಾಯತ ಧರ್ಮಗುರುಗಳು ಹಾಗೂ ಇಸ್ಲಾಂ ಧರ್ಮಗುರುಗಳು ಭಾವೈಕ್ಯತೆ
ಸರ್ವ ಜನಾಂಗಗಳ ಸದ್ಭಕ್ತರು ಭಕ್ತಿಯಿಂದ ಪಾಲ್ಗೊಂಡಿದ್ದರು.

Registered with the Registrar of News Papers in India
Registered Printed Periodical

To,

______________________________

______________________________

______________________________

______________________________

From:
Secretary
Basava Belagu Quarterly
Chittaragi Shri Vijayamahanteshwar Samsthan Math
ILKAL - 587125
Dist : Baglkot, Karnataka

Printed at - Smt. S.V. Tadkod, Rajashree Printing Press, Dharwad, 9741270385 Cover - Ravindra Vishwadnya, Dharwad
Edited and Published by : Secretary Chittaragi, Samsthan Math, Ilkal - 587 125 Karantaka Cell: 9972142666